# ಕಾನನ

ಜೂನ್ – 2021

ನಿಸರ್ಗದೆಡೆಗೆ ಪಯಣ



WCG
Wildlife Conservation Group

## ಲೇಖನಗಳು






ವಿನ್ಯಾಸ
ಧನರಾಜ್ ಎಂ.

ಮುಖಪುಟ ಛಾಯಾಚಿತ್ರ
ಕಾರ್ತಿಕ್ ಎ. ಕೆ.

ಪರಿಷ್ಕರಣೆ
ಮುರಳಿ ಎಸ್.
ರಾಕೇಶ್ ಆರ್. ವಿ.

ಕರಡು ತಿದ್ದುಪಡಿ
ಡಾ.ದೀಪಕ್ ಭ., ಮೈಸೂರು


© ಹಯಾತ್ ಮೊಹಮ್ಮದ್

# ಬೇವು

**ಸಾಮಾನ್ಯ ಹೆಸರು :** Neem

**ವೈಜ್ಞಾನಿಕ ಹೆಸರು :** *Azadirachta indica*



© ರಾಕೇಶ್ ಆರ್. ವಿ. ಬೇವು, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಬೇವಿನ ಮರವು ಭಾರತದ ಉಪಖಂಡ ಮೂಲವಾದರೂ ಕೂಡ ಪಾಕಿಸ್ತಾನ, ಶ್ರೀಲಂಕಾ, ಥೈಲ್ಯಾಂಡ್, ಮಲೇಷ್ಯಾ ಮತ್ತು ಇಂಡೋನೇಷ್ಯಾ ದೇಶಗಳ ಒಣಕಾಡುಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಸುಮಾರು 30 ಮೀಟರ್ ಗಳಷ್ಟು ಎತ್ತರ ಬೆಳೆಯಬಲ್ಲ ಇದರ ಕಾಂಡವು ಸುಮಾರು 1.8 ರಿಂದ 2.4 ಮೀಟರ್ ಸುತ್ತಳತೆ ಹೊಂದಿದ್ದು, ಕಂದು ಅಥವಾ ಕಡು ಕೆಂಪು ಬಣ್ಣದ ಒರಟು ತೊಗಟೆ ಹೊಂದಿರುತ್ತದೆ. ಎಲೆಗಳು ಸಣ್ಣ ಕೊಂಬೆಯಲ್ಲಿ ಒಂದಕ್ಕೊಂದು ವಿರುದ್ಧವಾಗಿ ಜೋಡಣೆಗೊಂಡಿರುವ ಸಂಯುಕ್ತ ಎಲೆಗಳನ್ನು ಹೊಂದಿದ್ದು, ಸುಮಾರು 20-30 ಸೆಂಟಿಮೀಟರ್ ಉದ್ದವಿರುತ್ತವೆ. ಬಿಳಿ ಅಥವಾ ಮಸುಕು ಹಳದಿ ಬಣ್ಣದ ಸಣ್ಣ ಹೂಗಳು ಸಣ್ಣಕೊಂಬೆಯಲ್ಲಿ ಸಮೂಹಗೊಂಡಿದ್ದು, ಏಪ್ರಿಲ್ ನಿಂದ ಮಾರ್ಚ್ ತಿಂಗಳಲ್ಲಿ ಹೂ ಬಿಡುತ್ತವೆ. ಇದರ ಹಣ್ಣು ಅಂಡಾಕಾರದ ಹಸಿರು ಅಥವಾ ಹಳದಿ ಬಣ್ಣವಿದ್ದು, ನಯವಾಗಿರುತ್ತದೆ. ಕಹಿ ಗುಣ ಹೊಂದಿರುವ ಬೇವಿನ ಮರದ ಎಲ್ಲಾ ಭಾಗಗಳು ಮನುಷ್ಯನ ದೇಹದ ಹಲವಾರು ಖಾಯಿಲೆಗಳಿಗೆ ಔಷಧಿಯಾಗಿ ಬಳಕೆಯಾಗುತ್ತದೆ.




# ಹುಲಿಕಲ್ ತೊರೆ

ಒಂಬೈನೂರು ವರುಷಗಳ ಹಿಂದಿನ ಮಾತಿದು, ಅದೊಂದು ದಿನ, ಮೊದಲ ಬಾರಿಗೆ ನನಗೆ ಮಾನವನ ದರುಶನವಾಗಿತ್ತು. ಸುಡು ಸುಡು ಬಿಸಿಲಿಗೆ ಬಳಲಿ ಬೆಂಡಾದ ಯೋಗಿಗಳ ಗುಂಪೊಂದು ನನ್ನನ್ನೇ ಅರಸಿ ಬಂದಂತೆ ಬಂದಿತು. ನನ್ನ ಮಡಿಲಿನಲ್ಲಿ ತುಸು ವಿಶ್ರಾಂತಿ ಪಡೆದಾದ ಬಳಿಕ ಸತ್ಸಂಗ ನಡೆಸಿತು. ಘಟ್ಟದ ಮೇಲಿನ ಬಯಲು ನಾಡಿನ ಕಡೆಯಿಂದ ಬಂದಂಥ ಮಹಾನುಭಾವರ ಆ ಗುಂಪಿನಲ್ಲಿ ತೇಜೋಮಯರಾದ ಓರ್ವರು ನನ್ನಲ್ಲಿರುವ ಜೀವಕಳೆಯ ಆಹ್ಲಾದ ವಾತಾವರಣಕ್ಕೆ ಹರುಷಗೊಂಡು ತಮ್ಮ ಸಂಗಾತಿಗಳನ್ನು ಉದ್ದೇಶಿಸಿ, "ನಾವೆಲ್ಲ, ಕೆಲದಿನಗಳ ಕಾಲ ಈ ತೊರೆಯ ಸಾನಿಧ್ಯದಲ್ಲಿಯೇ ನೆಲಸಬಹುದಲ್ಲವೆ?" ಎಂದು ಅರುಹಿದಾಗ, ಅವರೆಲ್ಲರೂ ಗುರುಗಳ ನಿರ್ಧಾರವನ್ನು ಒಮ್ಮತದಿಂದ ಒಪ್ಪಿ ನನ್ನಲ್ಲಿಯೇ ತಂಗಿದರು. ಆ ಯೋಗಿಯ ಹೆಸರು ಸಿದ್ದರಾಮಶರಣರೆಂದೂ, ಅವರು ದೂರದ ಕಲ್ಯಾಣದಿಂದ ಬಂದವರೆಂದು ನಂತರದ ದಿನಗಳಲ್ಲಿ ಅವರು ನಡೆಸುತ್ತಿದ್ದ ಶಿವಾನುಭವಗಳಿಂದ ನನಗೆ ತಿಳಿಯಿತು. ಬಂದಂತಹ ಸಂತರ ಜೋಳಿಗೆಗಳಲ್ಲಿದ್ದ ತಾಡೋಲೆಗಳಲ್ಲಿ ಅಮೂರ್ತ ಅನುಭವಗಳನ್ನು ಮೂರ್ತ ರೂಪಕ್ಕೆ ಇಳಿಸಿರುವ ಸಾಹಿತ್ಯದ ನುಡಿಗಟ್ಟುಗಳಿದ್ದವು; ಅವುಗಳನ್ನು ಅವರು ವಚನಗಳೆಂದು ಕರೆಯುತ್ತಿದ್ದರು. ಈ ಶರಣರು, ಉಳವಿಯ ಗೊಂಡಾರಣ್ಯದಲ್ಲಿ ಉಳಿದುಕೊಂಡಿದ್ದ ಚೆನ್ನಬಸವಣ್ಣ ಹಾಗೂ ಅಕ್ಕನಾಗಾಯಿಯನ್ನು ಭೇಟಿಯಾಗಲು ಹೊರಟಿದ್ದರು. ಅನುಭವಿಗಳ ತಂಡ ನನ್ನ ಪರಿಸರದಲ್ಲಿದ್ದಷ್ಟು ದಿನಗಳ ಕಾಲ ಅತ್ಯಂತ ಆನಂದದಿಂದ ಇತ್ತು; ಅವರು ನಡೆಸುತ್ತಿದ್ದ ಸತ್ಸಂಗಗಳಲ್ಲಿ ನಾನೂ ಭಾಗಿಯಾಗಿರುತ್ತಿದ್ದೆ. ಪ್ರತಿ ಗೋಷ್ಠಿಯಲ್ಲಿ ನಾಲ್ಕಾರು ವಚನಗಳ ಕುರಿತು ಚರ್ಚೆ

ನಡೆಯುತ್ತಿತ್ತು. ಒಂದು ಮುಂಜಾನೆ, ನನ್ನಲ್ಲಿದ್ದ ನಯನಮನೋಹರ ತಡಸಿಲಿನ ಪಕ್ಕದಲ್ಲಿದ್ದ ವಿಶಾಲವಾದ ಏಕಶಿಲಾ ವೇದಿಕೆಯಲ್ಲಿ ಚರ್ಚೆಗೆ ಎಲ್ಲರೂ ಸೇರಿದ್ದಾಗ ಸಿದ್ದರಾಮಶರಣರು ಶ್ರೀಶೈಲದೆಡೆಗೆ ಹೋದಂತಹ ಶರಣೆ ಮಹಾದೇವಿಯಕ್ಕನ ವಚನವೊಂದನ್ನು ಹಾಡಿ ತಮ್ಮ ಸಂಗಾತಿಗಳಿಗೆ ವಾಚಿಸಿದರು. ವಚನ ಹೀಗಿತ್ತು *"ಚಿಲಿಪಿಲಿ ಎಂದೋಡುವ ಗಿಳಿಗಳಿರಾ ! ಸರವೆತ್ತಿ ಪಾಡುವ ಕೋಗಿಲೆಗಳಿರಾ ! ಎರಗಿ ಬಂದಾಡುವ ದುಂಬಿಗಳಿರಾ! ಕೊಳನ ತಡಿಯಾಡುವ ಹಂಸಗಳಿರಾ ! ಗಿರಿಗುಹ್ವರದೊಳಗಾಡುವ ನವಿಲುಗಳಿರಾ ! ನೀವು ಕಾಣಿರೆ ? ನೀವು ಕಾಣಿರೆ ? ಚೆನ್ನಮಲ್ಲಿಕಾರ್ಜುನನೆಲ್ಲಿದ್ದಹನೆಂಬುದು ಬಲ್ಲಡೆ ನೀವು ಹೇಳಿರೇ ! "*.

ನಿಸರ್ಗದ ಜೊತೆ ತದಾತ್ಮ್ಯತೆಯನ್ನು ಹೊಂದುತ್ತಾ ಶಿವಾನುಭವದ ಸಾಧನೆಗೆ ಅನುವು ಮಾಡಿಕೊಡುತ್ತಿದ್ದ ವಚನಗಾಯನವು ಸಿದ್ದರಾಮರ ಕಂಠಸಿರಿಯಿಂದ ಸುಶ್ರಾವ್ಯವಾಗಿ ಮೂಡಿ ಬಂದಿತ್ತು; ಭಕ್ತಿಭರಿತ ಹಾಡುಗಾರಿಕೆ ಅಲ್ಲಿ ನೆರೆದಿದ್ದ ಇತರ ಶರಣರನ್ನು ಅನುಭವ ಲೋಕದೊಳಗೆ ತೇಲಿಸಿತ್ತು. ಆ ವಚನವು ಇಂದಿಗೂ ಅನೇಕ ಶತಮಾನಗಳು ಉರುಳಿದರೂ ಈ ಕ್ಷಣವೂ ನನ್ನ ಹೃದಯಕಮಲದಲ್ಲಿ ನಲಿದಾಡುತ್ತಿದೆ.


© ಅರವಿಂದ ರಂಗನಾಥ್

ಇದಾದ ನಂತರ ನಾಲ್ಕು ಶತಮಾನಗಳವರೆಗೆ ನಾನು ಮಾನಿಸರ ಒಂದು ನೆರಳನ್ನೂ ಕಂಡಿರಲಿಲ್ಲ. ಒಂದು ನಸುಕಿನಲ್ಲಿ ವೈಭವಪೋಷಿತ ವಸ್ತ್ರಗಳನ್ನು ಧರಿಸಿದ್ದ ದೊರೆಸಾನಿಯೊಬ್ಬಳು ಪರಿಜನರೊಂದಿಗೆ ನನ್ನ ತಟಾಕಿನಲ್ಲಿ ಮಿಂದು, ಹಿಂದೆ ಸಿದ್ದರಾಮಶರಣರು ವಿರಾಜಮಾನರಾಗಿದ್ದ ಅದೇ ಕಲ್ಲುಹಾಸಿನ ಮೇಲೆ ಕೆಲಹೊತ್ತು ವಿಶ್ರಮಿಸಿದಳು. ಅವಳು ಹಿಂದಿರುಗುವಾಗ ದಡದ ಇಕ್ಕೆಲ್ಲಗಳಲ್ಲಿ ಅಗಾಧವಾಗಿ ಬೆಳೆದ ಮರಗಳನ್ನು ತಬ್ಬಿಕೊಂಡಿದ್ದ ಅಪೂರ್ವ ರುಚಿಯ ಕಾಳುಮೆಣಸಿನ ಬಳ್ಳಿಗಳ ಕೆಲ ತುಂಡುಗಳನ್ನು ಹೊತ್ತೊಯ್ದಳು. ಪರಿಚಾರಿಕೆಯರ ಮಾತುಗಳನ್ನು ಆಲಿಸಿದಾಗ ಸೌಂದರ್ಯವತಿಯೂ, ಧೈರ್ಯಗಿತ್ತಿಯೂ ಆದ ಆ ಮಹಿಳೆ ಗೇರುಸೊಪ್ಪೆಯ ಪ್ರಾಂತ್ಯದ ಕಾಳುಮೆಣಸಿನರಾಣಿ ಚೆನ್ನಭೈರಾದೇವಿಯೆಂದು ತಿಳಿಯಿತು. ರಾಣಿಪರಿವಾರ ಉಲ್ಲಾಸಭರಿತವಾಗಿ ಇಲ್ಲಿಂದ ಕರಾವಳಿಯ ಹೊನ್ನೂರಿನ ಬಸದಿಗಳತ್ತ ತೆರಳಿತು.

ಮತ್ತೆ ನೂರಾರು ವರುಷಗಳು ಗತಿಸಿರಬಹುದು, ದೊರೆಯೊಬ್ಬ ತನ್ನ ಕೆಲ ಸೈನಿಕರೊಂದಿಗೆ ಒಪ್ಪೊತ್ತು ಕಲ್ಲುಹಾಸಿನ ಮೇಲೆ ನಿದ್ರಿಸಿ ಆಯಾಸ ಪರಿಹರಿಸಿಕೊಂಡು ಮುಂದೆ ಹೊರಟ; ಆತನು ಸೋಂದೆಯ ರಾಜ ಸದಾಶಿವಲಿಂಗ ನಾಯಕನಾಗಿದ್ದ. ತನ್ನ ರಾಜ್ಯದ ವಾಯುವ್ಯ ಗಡಿಯಲ್ಲಿ ಕಾಳಿನದಿಯು ಶರಧಿಯನ್ನು ಸೇರುವಲ್ಲಿರುವ ಚಿತ್ರಾಕುಲಾ ಬೆಟ್ಟದ ಮೇಲೆ ಕೋಟೆ ಕಟ್ಟಿಸಿ ತನ್ನ ಪ್ರಾಂತ್ಯದ ರಾಜಧಾನಿ ಸೋಂದೆಗೆ ವಾಪಸಾಗುವ ಮುನ್ನ ಉಳವಿ ಚೆನ್ನಬಸವಣ್ಣನ ಗದ್ದುಗೆಗೆ ನಮಿಸುವ ಬಯಕೆ ಅವನದಾಗಿತ್ತು. ಹೋಗುವ ಮುಂಚೆ ನಾನಿರುವ ಸ್ಥಳದಲ್ಲೂ ತನ್ನ ಪ್ರಾಂತ್ಯದ ಗಡಿಗುರುತುಗಳನ್ನು ಹಾಕಿಸಿದ. ಹೀಗೆ ಕೆಲವರ್ಷಗಳಾದ ನಂತರ ಮತ್ತೊಂದು ಮಧ್ಯಾಹ್ನ ಒಬ್ಬ ಬಿಳಿ ಬಣ್ಣದ ವ್ಯಕ್ತಿಯೊಬ್ಬ ಬಂದ; ಅವನ ವೇಷಭೂಷಣವು ಚಿತ್ರವಿಚಿತ್ರವಾಗಿತ್ತು. ಕಾಲಿಗೆ ಉದ್ದನೆಯ ಬೂಟುಗಳನ್ನು ಧರಿಸಿ, ತಲೆಗೆ ವರ್ತುಲಾಕಾರದ ಟೊಪ್ಪಿ ಹಾಕಿಕೊಂಡು, ಕೈಯಲ್ಲಿ ಮಸೂರ ಹಾಗೂ ಇನ್ನಿತರ ಲೇಖನಿ ಸಾಮಗ್ರಿಗಳನ್ನು ಹಿಡಿದುಕೊಂಡಿದ್ದ; ಅವನೊಂದಿಗೆ ನಾಲ್ಕಾರು ಸೇವಕರೂ ಇದ್ದರು. ಆತನ ಹೆಸರು ಫ್ರಾನ್ಸಿಸ್ ಬುಕಾನನ್ ಎಂದೂ, ಈತ ಮಾತನಾಡುವ ಭಾಷೆ ಆಂಗ್ಲವೆಂದೂ ತಿಳಿಯಿತು. ಜನಜೀವನ, ಕಾಡು, ನದಿ, ಬೆಟ್ಟಗುಡ್ಡ, ಸಮುದ್ರತೀರ, ಸಸ್ಯಗಳನ್ನು ಮೋಜಣಿ ಮಾಡುತ್ತಾ ದೂರದ ಮದ್ರಾಸಿನಿಂದ ಕಾಲ್ನಡಿಗೆಯಿಂದಲೇ ಬುಕಾನನ್ ಬಂದಿದ್ದ. ಆತನ ತಂಡವು ನನ್ನಲ್ಲಿರುವ ಸಸ್ಯರಾಶಿಗಳ ಮಾಹಿತಿಗಳನ್ನು ಕಲೆಹಾಕ ತೊಡಗಿತು. ಈತ ಬಹುಸಾಹಸಿ ಎನ್ನುವುದು ನನ್ನಲ್ಲಿರುವ ಎತ್ತರದ ಜಲಪಾತವನ್ನು ನೋಡಿ, “ಓಹೋ…” ಎಂದವನೇ ಅದರ ತುದಿಯಿಂದ ಒಂದೇ ಸಾರಿಗೆ ‘ದುಡುಂ’ ಎಂದು ಮಡುವಿನ ಆಳಕ್ಕೆ ಧುಮುಕಿದಾಗ ನನಗೆ ಅರಿವಾಯಿತು. ಜಲಧಾರೆಯ ತುತ್ತತುದಿಯಿಂದ ಪ್ರಾಣಿಯೊಂದು ಹೀಗೆ ಧುಮುಕಿದ್ದನ್ನು ಮೊದಲ ಬಾರಿಗೆ ಕಂಡು ಮೂಕವಿಸ್ಮಿತನಾದೆ. ಬುಕಾನನ್ ಮಡುವಿನಲ್ಲಿ ಮನಸೋಯಿಚ್ಛೆ ಈಜಾಡಿ, ಜಲಪಾತದ ದಬದಬೆಗೆ ಮೈಯೊಡ್ಡಿ, ಮೈಮನಗಳನ್ನು ಹಗುರಮಾಡಿಕೊಂಡು ಕಣಿವೆಯ ಮತ್ತೊಂದು ತುದಿಯಲ್ಲಿರುವ ಕವಳಾ ಗುಹೆಗಳ ಸಮೀಪದ ನಾಗಝರಿ ಕೊಳ್ಳದಲ್ಲಿ ಧುಮುಕುವ ಜಲಪಾತಗಳತ್ತ ತನ್ನ ಸಹಚರರೊಡನೆ ನಡೆದ.




ಬುಕಾನನ್ ಬಂದು ಹೋಗಿ ಕೆಲದಶಕಗಳೇ ಸರಿದು ಹೋದ ದಿನಗಳವು. ಸೂರ್ಯನು ನೆತ್ತಿ ಸುಡುವ ಮಧ್ಯಾಹ್ನವೊಂದರಲ್ಲಿ ತಂಪಾಗಿ ಮೌನದಿಂದ ಹರಿಯುತ್ತಿದ್ದ ನನ್ನ ಬಳಿಗೆ, ತಂಬೂರಿ ಮೀಟುತ್ತಾ ಹಾಡುತ್ತಾ ಕುಣಿಯುತ್ತಾ ಮಹಾನುಭಾವರೊಬ್ಬರು ಹತ್ತಾರು ಶಿಷ್ಯಬಳಗದೊಂದಿಗೆ ಬಂದು, ಮತ್ತೆ ಅದೇ ಕಲ್ಲುಹಾಸಿನ ಮೇಲೆ ವಿಶ್ರಾಂತಿಗಾಗಿ ತಂಗಿದರು. ಉದ್ದನೆಯ ಗಡ್ಡವನ್ನು ಬಿಟ್ಟು ಹಸಿರು ಹೊದಿಕೆಯನ್ನು ತೊಟ್ಟಂತಹ ಆ ಸಂತ ಅಪೂರ್ವ

ತತ್ವಪದಕಾರ ಶಿಶುನಾಳ ಶರೀಫರಾಗಿದ್ದರು; ಶರೀಫರು ಕುಂದಗೋಳದಿಂದ ಉಳವಿಯತ್ತ ಜಾತ್ರೆಗೆ ಹೊರಟಿದ್ದರು. ಹೊರಗೆ ಚಳಿಗಾಲ ಮುಗಿಯುವ ಹಂತಕ್ಕೆ ಬಂದು ಬಿರು ಬಿಸಿಲೇರಿದ್ದರೂ, ನನ್ನ ಪರಿಸರದ ಮಡಿಲಿನಲ್ಲಿನ ನೆರಳಿನ ತಂಪು ಅವರಿಗೆ ತುಂಬಾ ಹಿಡಿಸಿ, ಆ ಆನಂದದಲ್ಲಿಯೇ *"ಉಳವಿ...ಜಾತ್ರೆಗೆ ಹೋಗೋಣ....ತಿಳಿದು ಬ್ರಹ್ಮದ ಬಯಲೊಳಗಾಡೋಣ... ನಮ್ಮs...ಉಳವಿ..ಜಾತ್ರೆಗೆ ಹೋಗೋಣ ಒಮ್ಮನದಿಂದಲಿ...ಶ್ರೀಚೆನ್ನಬಸವನ ರಮ್ಯದ ವನವನವ ಗಮ್ಯನೆ ನೋಡುತಾ ಉಳವಿ ಜಾತ್ರೆಗೆ ಹೋಗೋಣ"* ಎನ್ನುವ ಅರ್ಥಗರ್ಭಿತ ಪದವನ್ನು ಸ್ಥಳದಲ್ಲೇ ರಚಿಸಿ, ತಂಬೂರಿಯನ್ನು ಮೀಟುತ್ತಾ, ಕುಣಿಯುತ್ತಾ ನಲಿಯುತ್ತಾ ಉಳವೀಶನತ್ತ ತೆರಳಿದರು.




ಶರೀಫರ ಭೇಟಿಯ ತರುವಾಯ ಮನುಷ್ಯರ ಒಡನಾಟ ನನ್ನೊಂದಿಗೆ ಹೆಚ್ಚಾಗುತ್ತಾ ಹೋಯಿತು. ಶರೀಫಜ್ಜನಿಗೆ ದಾರಿ ತೋರಿಸಲು ಬಂದಿದ್ದ ಸಮೀಪದಲ್ಲಿರುವ 'ಕೊಡ್ತಹಳ್ಳಿ' ಎಂಬ ಗ್ರಾಮದ ರೈತರಲ್ಲಿನ ಕೆಲವರು ಮುಂದಿನ ವರುಷಗಳಲ್ಲಿ ನನ್ನ ಸುತ್ತ ಪ್ರಸಕ್ತವಾದ ಭೂಮಿಯನ್ನು ಆರಿಸಿ ಉಳುಮೆ ಮಾಡತೊಡಗಿದರು. ಮಳೆಗಾಲದಲ್ಲಿ ವೇಗದಿಂದ ಹರಿದು ಹೋಗುತ್ತಿದ್ದ ಹೆಚ್ಚಿನ ನೀರನ್ನು ತಮ್ಮ ಜಮೀನುಗಳಿಗೆ ಹಾಯಿಸಿ ಭತ್ತ ಬೆಳೆಯತೊಡಗಿದರು; ಕುಟುಂಬಗಳು ಹೆಚ್ಚಾದಂತೆ ಇಲ್ಲಿಯೂ ಚಿಕ್ಕ ಗ್ರಾಮವೇ ಹುಟ್ಟಿಕೊಂಡಿತು. ಇಲ್ಲಿ ಹುಲಿಗಳು ನೀರು ಕುಡಿಯಲು ಹಾಗೂ ವಿಶ್ರಮಿಸಲು ಬರುತ್ತಿದ್ದರಿಂದ ಈ ಗ್ರಾಮಕ್ಕೆ 'ಹುಲಿಬೈಲು' ಎಂದು ಹೆಸರಾಯಿತು. ಈ ಹಿಂದೆ ಇಲ್ಲಿಗೆ ಬಂದಿದ್ದ ಸಿದ್ದರಾಮಶರಣ ಮಗ್ಗುಲಲ್ಲಿರುವ ಬೆಟ್ಟದ ತುದಿಯಲ್ಲಿ ತುಸುದಿನಗಳ ಕಾಲ ತಂಗಿದ್ದನೆಂಬ ಪ್ರತೀತಿ ಇದ್ದುದರಿಂದ ಗುಡ್ಡವನ್ನು ಗ್ರಾಮಸ್ಥರು 'ಅಡವಿಸಿದ್ದೇಶ್ವರಬೆಟ್ಟ' ವೆಂದು ಕರೆಯಹತ್ತಿದರು. ಈ ಬೆಟ್ಟದ ಒಂದು ಕೊರಕಲಿನಲ್ಲಿ ಝರಿಯ ರೂಪದಲ್ಲಿ ಹುಟ್ಟಿ ಅನೇಕ ತಡಸಲುಗಳಾಗಿ, ಜಲಪಾತಗಳಾಗಿ ಕೆಳಗಡೆ ಧುಮುಕಿ, ಹರಿದು ತಪ್ಪಲಿನಲ್ಲಿರುವ ಹುಲಿಬೈಲು ಗ್ರಾಮದ ಮೂಲಕ ನಾಲ್ಕೈದು ಮೈಲುಗಳಷ್ಟು ಬಳುಕಿ ಹರಿದು ಮುಂದೆ ಕಪ್ಪು ಸುಂದರಿ ಎಂದೇ ಖ್ಯಾತಳಾದ ಕಾಳಿಯ ಒಡಲು ಸೇರುವ ತೊರೆಯಾದ ನನ್ನನ್ನು 'ಅಳಶ್ಯಾ ಹೊಳೆ' ಎಂದು ಕರೆದರು. ಗ್ರಾಮದ ಜನರು ನನ್ನ ಜೊತೆ ಅನ್ಯೋನ್ಯತೆಯಿಂದ ಬಾಳುತ್ತಿದ್ದರು. ಹುಲಿಬೈಲಿನ ರೈತರೆಲ್ಲ ಒಂದು ಬಾರಿ ಘಟ್ಟದ ಮೇಲಿನ ಶಿರಸಿ ಪಟ್ಟಣಕ್ಕೆ ಗಾಂಧೀಜಿಯ ಭಾಷಣ ಕೇಳಲು ಹೋಗಿ ಬಂದಿದ್ದರು. ಭಾಷಣವನ್ನು ಆಲಿಸಿದ್ದ ಅವರೆಲ್ಲ ತುಂಬಾ ಹರುಷದಿಂದ ಇನ್ನೇನು ಕೆಲ ಕಾಲದಲ್ಲೇ ತಮಗೆಲ್ಲ ಕುಂಪಣಿ ಸರ್ಕಾರದ ಬಾಧೆಯಿಂದ ಸ್ವಾತ್ರಂತ್ರ್ಯ ಸಿಕ್ಕಿ ಭರತ ಭೂಮಿ

ಮತ್ತೆ ಒಂದಾಗಿ; ನಮ್ಮದೇ ಸ್ವರಾಜ್ಯವನ್ನು ರಚಿಸಿಕೊಂಡು ನಮ್ಮ ಬದುಕನ್ನು ಶಿರಸಿ ಪಟ್ಟಣದ ಬದುಕಿನಂತೆಯೇ ಹಲವೊಂದು ಅನುಕೂಲತೆಗಳಿಂದ ಹಸನುಗೊಳಿಸಿಕೊಂಡು ನೆಮ್ಮದಿಯಿಂದ ಜೀವಿಸಬಹುದೆಂದು ವಿಚಾರ ಮಾಡುತ್ತಿದ್ದರು.

ಗಾಂಧೀಜಿಯ ಭಾಷಣವಾಗಿ ಒಂದೆರೆಡು ದಶಕಗಳು ಕಳೆದಾದ ನಂತರ ಸ್ವಾತಂತ್ರ್ಯ ಘೋಷಣೆ ಆಯ್ತು; ಅದು ಆಗುವುದೆ ತಡ, ಹುಲಿಬೈಲಿನ ಗ್ರಾಮದ ಚಾವಡಿಯ ಮೇಲೆ ತ್ರಿವರ್ಣ ಧ್ವಜವು ಹಾರಾಡಿತು; ಎಲ್ಲರೂ "ಭಾರತ ಮಾತಾಕಿ ಜೈ" ಅಂದು ಕೂಗಿದರು. ಗ್ರಾಮದಲ್ಲಿ ಅನೇಕ ಬದಲಾವಣೆಗಳು ಆಗತೊಡಗಿದವು. ಶಾಲೆ, ಗ್ರಂಥಾಲಯ, ಆಸ್ಪತ್ರೆಗಳು ಸ್ಥಾಪನೆಗೊಂಡವು. ಅಧಿಕಾರಿಗಳು ಕುಡಿಯುವ ನೀರಿಗಾಗಿ ಬಾವಿ ತೋಡಲು ಬಂದಾಗ ಗ್ರಾಮಸ್ಥರು, "ನಮಗೆ ಅಳಶ್ಯಾ ಹೊಳೆ ಇದೆ ಅದರ ಸಿಹಿಯಾದ ಶುದ್ಧ ನೀರು ಸರ್ವಕಾಲಕ್ಕೂ ಸಿಗುತ್ತದೆ ಆದ್ದರಿಂದ ಬಾವಿಯು ಗ್ರಾಮಕ್ಕೆ ಬೇಡ" ವೆಂದು ಅಧಿಕಾರಿಗಳನ್ನು ವಾಪಾಸ್ ಕಳಿಸಿದರು. ಆ ಕಾಲದಲ್ಲಿ ಮತ್ತೊಬ್ಬ ಪ್ರಸಿದ್ಧ ವ್ಯಕ್ತಿ ಹುಲಿಬೈಲಿಗೆ ಭೇಟಿಕೊಟ್ಟಿದ್ದರು. ಆ ಭೇಟಿ ಬಹು ರೋಚಕವಾದದ್ದಾಗಿತ್ತು. ಇನ್ನೇನೂ ಮಳೆಗಾಲ ಮುಗಿದು ಕಾರ್ತಿಕ ಮಾಸ ಶುರುವಾಗುವುದರಲ್ಲಿತ್ತು; ಗ್ರಾಮದ ಹಿರಿಯರೊಬ್ಬರು ನನ್ನ ಮಡಿಲಿನ ಅದೇ ವಿಶಾಲವಾದ ಕಲ್ಲುಹಾಸನ್ನು ತಮ್ಮೊಡನೆ ಬಂದಂಥ ಅತಿಥಿ ಮಹಾಜನರಿಗೆ ತೋರಿಸಿದರು. ಬಂದ ತಂಡವು ಬಹು ಸಂತೋಷದಿಂದ ಹಾಸಿನ ಮೇಲೆ ಗುಡಾರಗಳನ್ನು ಹಾಕಿ ಠಿಕಾಣಿ ಹೂಡಿತು. ತಂಡದ ಮುಖ್ಯಸ್ಥರು ಸಣಕಲು ದೇಹದ ಕೋಲು ಮುಖವನ್ನು ಹೊತ್ತು ಕನ್ನಡಕಧಾರಿಯಾಗಿದ್ದರು. ಅವರ ಬಳಿಯಲ್ಲಿ ದುರ್ಬೀನು ಹಾಗೂ ಕ್ಯಾಮರಾಗಳಿದ್ದವು. ಈ ಮಹಾನುಭಾವರ ಹೆಸರು ಸಲೀಂ ಅಲಿ ಎಂದೂ, ಭರತಖಂಡದ ಶ್ರೇಷ್ಠ ಪಕ್ಷಿತಜ್ಞರೆಂದೂ ನಂತರ ಗೊತ್ತಾಯಿತು. ಸಲೀಂ ಅಲಿ ಬಂದ ಕೂಡಲೆ ಒಂಚೂರೂ ವಿಶ್ರಮಿಸದೆ ಹಕ್ಕಿಗಳನ್ನು ಗುರುತಿಸುತ್ತಾ, ಅವುಗಳ ಗರಿ, ಬಣ್ಣ, ಕಣ್ಣು, ಕಾಲು, ಕೂಗು ಹಾಗೂ ಇನ್ನಿತರ ವಿವರಗಳನ್ನು ಹೇಳುತ್ತಾ ಸಹಾಯಕರಿಗೆ ದಾಖಲಿಸಿಕೊಳ್ಳಲು ಸೂಚಿಸುತ್ತಿದ್ದರು. ನನ್ನ ಪರಿಸರದ ಜೀವ ವೈವಿಧ್ಯತೆಯ ವಿಶಿಷ್ಟತೆಗೆ ಬೆರೆಗುಗೊಂಡ ಸಲೀಂ ಅಲಿ ತಾನು ನೋಡಿದ ಅಪೂರ್ವ ತಾಣಗಳಲ್ಲಿ ಇದೂ ಕೂಡ ಒಂದು ಎಂದು ತಮ್ಮ ಸಂಗಾತಿಗಳಿಗೆ ಮಾಡುತ್ತಿದ್ದ ನನ್ನ



ವೈಭವದ ವರ್ಣನೆಯನ್ನು ಕೇಳಿ ನನಗೆ ನಾನೆ ಸಂಭ್ರಮಿಸಿದೆ. ಸಲೀಂ ಅಲಿ ಬಂದಾಗ ಹುಣ್ಣಿಮೆಯ ದಿನಗಳಾಗಿದ್ದವು. ಅವರು ಇರುಳಿನಲ್ಲಿಯೂ ಹಕ್ಕಿಗಳನ್ನು ಗುರುತಿಸಿ ವಿವರಗಳನ್ನು ದಾಖಲಿಸುತ್ತಿದ್ದರು. ಪಕ್ಷಿತಜ್ಞರ ತಂಡ ಹೊರಡುವ ಕೊನೆಯ ದಿನದ ನಸುಕಿನ ಹೊತ್ತಲ್ಲಿ, ಅಡವಿಯಲ್ಲಿ ಇನ್ನೂ ಸೂರ್ಯನ ಪ್ರಥಮ ಚುಂಬನದ ಸ್ಪರ್ಶವೂ ಆಗಿರಲಿಲ್ಲ, ಬಾಲರವಿಯನ್ನು ಸ್ವಾಗತಿಸಲು ಬಿದಿಗೆ ಚಂದ್ರಮನು ಆಗಸದಲ್ಲಿ ಇನ್ನೂ ನಗುತ್ತಾ ತೇಲುತ್ತಿದ್ದ. ಬೆಳ್ಳಿ ಚುಕ್ಕಿ ಇನ್ನೂ ಪ್ರಕಾಶಮಾನವಾಗಿ ಮಿನುಗುತ್ತಿತ್ತು. ಅಂತಹ ಆಹ್ಲಾದಕರ ವಾತಾವರಣದಲ್ಲಿ ದಂಡೆಯ ಮೇಲಿದ್ದ ಹೊಳೆಮತ್ತಿ ಮರದಿಂದ ಸುಮಧುರವಾದ ಸಿಳ್ಳೆಯ ಧ್ವನಿಯು ಕೇಳಲಾರಂಭಿಸಿತು. ಪಕ್ಷಿತಜ್ಞರೆಲ್ಲರೂ ಅಚ್ಚರಿಯಿಂದ ಕಿವಿಗಳನ್ನು ನಿಮಿರಿಸಿಕೊಂಡು, ಕಣ್ಣುಗಳನ್ನು ಅಗಲಿಸಿ ಆ ಇನಿದನಿಯು ಹೊಮ್ಮುತ್ತಿದ್ದ ಜಾಗದತ್ತ ನೋಡಿದರು. ಅವರಿಗೆ ಅಲ್ಲಿ ಏನೂ ಕಾಣಲಿಲ್ಲ. ದನಿ ಮತ್ತೆ ಮತ್ತೆ ಅಲೆ ಅಲೆಯಾಗಿ ಮಾರ್ದನಿಸತೊಡಗಿತು. ಈ ಸಿಳ್ಳನ್ನು ನಾನು ಹುಟ್ಟಿದಾಗಿನಿಂದ ಕೇಳುತ್ತಿದ್ದ ಕಾರಣ ನನಗೇನು ಅದು ವಿಶೇಷವೆನಿಸದಿದ್ದರೂ, ಹಕ್ಕಿಯ ಹಾಡುಗಾರಿಕೆಯ ವಿಶಿಷ್ಟತೆಯು ನನ್ನ ಈ ಮನೆಯ ಹೆಮ್ಮೆಯರೂಪದ ಗರಿ ಎಂದಂತೂ ನಾನು ಭಾವಿಸಿದ್ದೆ. ಆ ಹಕ್ಕಿಯ ಸಾಕಷ್ಟು ಕುಟುಂಬಗಳು ನನ್ನ ಒಡಲಿನಲ್ಲಿಯೇ ವಾಸವಾಗಿದ್ದರಿಂದ ಅವುಗಳ ಪರಸ್ಪರ ಪ್ರೀತಿ ಪ್ರಣಯ, ಗೂಡು ಕಟ್ಟುವುದು ಹಾಗೂ ಬಾಣಂತನಗಳನ್ನು ನಾನು ಚಿಕ್ಕಂದಿನಿಂದ ನೋಡುತ್ತಲೇ ಬಂದಿದ್ದೆ. ತುಸು ಹೊತ್ತಿನ ನಂತರ ಟೊಂಗೆಯೊಂದರಲ್ಲಿ ಉಲಿಯುತ್ತಿರುವ ಹಕ್ಕಿಯು ಅಸ್ಪಷ್ಟವಾಗಿ ಸಲೀಂ ಅಲಿಗೆ ಮೊದಲು ಗೋಚರಿಸಿದಾಗ ಅವರ ಪುಟ್ಟ ಮುಖ ಮೊರದಗಲದಂತಾಗಿ ಪಿಸುದನಿಯಲ್ಲಿ ಇತರರಿಗೆ ಸನ್ನೆ ಮಾಡಿ, ಹತ್ತಿರ ಕರೆದು *"ನೋಡಿ...ಅತ್ತ...ಆs.. ಟಿಸಿಲೊಡೆದ ಟೊಂಗೆಯ ಮೇಲೆ"* ಎಂದು ತೋರಿಸಿದರು. ಅವರೆಲ್ಲ "ಹೋ, ಗ್ರೇಟ್.. ಗ್ರೇಟ್.." ಎಂದು ಉದ್ಗಾರ ತೆಗೆದು ಅದು ಕಂಡ ಭಾಗ್ಯಕ್ಕೆ ಸಂತೋಷಗೊಂಡು ಕುಣಿದಾಡತೊಡಗಿದರು. ಸಲೀಂ *"ಶ್..ಹಕ್ಕಿ ಹಾರಿಹೋಗುತ್ತದೆ ಸುಮ್ಮನಿದ್ದು ನೋಡಿ"* ಎಂದು ಸಣ್ಣದಾಗಿ ಗದರಿಸಿ ತುಂಬಾ ಚುರುಕಿನಿಂದ ಬೆಳಕಾಗುವವರೆಗೆ ಅದನ್ನು ಹಿಂಬಾಲಿಸುತ್ತಾ ವಿವರಗಳನ್ನು ಸಂಗ್ರಹಿಸಿದರು. ಸುಶ್ರಾವ್ಯವಾಗಿ ಹಾಡುತ್ತಿದ್ದ ನೇರಳೆಮಿಶ್ರಿತ ಬಣ್ಣದ ಹಾಡುಗಾರ ಹಕ್ಕಿಗೆ ಸಲೀಂ ಇತರರೊಂದಿಗೆ ಸಮಾಲೋಚಿಸಿ ಮಲಬಾರ್ ವಿಷಲಿಂಗ್ ತ್ರಷ್' ಎಂದು ಕರೆದರೆ ಅವರ ಜೊತೆಗಿದ್ದ ಸ್ಥಳೀಯರೊಬ್ಬರು *ಅಚ್ಚಕನ್ನಡದಲ್ಲಿ "ಅಯ್ಯೋ, ಅದು ಮಲೆನಾಡ ಸಿಳ್ಳಾರ !"* ವೆಂದು ಉದ್ಗರಿಸಿದರು.






ಸಲೀಂ ಅಲಿ ಭೇಟಿ ನೀಡಿ ಒಂದೆರೆಡು ದಶಕಗಳಾಗಿದ್ದವೇನೋ? ಅದೊಂದು ದಿನ ಆಷಾಢದ ಕಾರ್ಮೋಡಗಳು ಒಟ್ಟಾಗಿ ಹುಲಿಬೈಲಿನ ಮೇಲೆ ಮುಗಿಬೀಳುವಂತೆ ಘರ್ಜಿಸುತ್ತಿದ್ದವು. ಮಧ್ಯಾಹ್ನವೇ ಸಂಜೆಯ ಮಬ್ಬುಗತ್ತಲು ಕವಿದಿತ್ತು, ಸಮಾನಾಂತರದಲ್ಲಿ ನೆಗೆಯುತ್ತಿದ್ದ ಮಿಂಚುಗಳೇ ತುಸು ಬೆಳಕನ್ನು ಹರಡುತ್ತಿದ್ದವು. ಊರ ಗೌಡರು ರಾಮಲಿಂಗೇಶ್ವರ ಗುಡಿಯ ಮುಂದುಗಡೆಯಿರುವ ಗ್ರಾಮಚಾವಡಿಯ ಅಂಗಳದಲ್ಲಿ ಗ್ರಾಮಸ್ಥರ ಸಭೆಯೊಂದನ್ನು ಕರೆದಿದ್ದರು. ಅಲ್ಲಿ ನೆರೆದಿದ್ದವರ ಮುಖಗಳಲ್ಲಿ ದುಗುಡವನ್ನು ತುಂಬಿಕೊಂಡೆ ಕುಳಿತ್ತಿದ್ದರು. ಮ್ಲಾನವದನರಾಗಿದ್ದ ಗೌಡರು ಮಾತನಾಡುತ್ತಾ, "ನೋಡಿ, ಶಿರಸಿಯಿಂದ ಬಂದ ಸರಕಾರದ ನೋಟಿಸು ಇದು.... ಕಣಿವೆಯ ಆ ತುದಿಯಲ್ಲಿರುವ 'ಅಮಗೆ'ಮಜಿರೆಯಲ್ಲಿ ವಿದ್ಯುತ್ ಯೋಜನೆಯನ್ನು ಸರಕಾರವು ಪ್ರಾರಂಭಿಸಲಿದೆಯಂತೆ. ಈ ಯೋಜನೆಯಲ್ಲಿ ಕಾರ್ಯ ನಿರ್ವಹಿಸಲು ಬರುವ ನೌಕರಸ್ತರಿಗೆ ವಸತಿಗಳು ಹಾಗೂ ಇತರ ಕಚೇರಿಗಳಿಗಾಗಿ ನಮ್ಮ ಗ್ರಾಮವನ್ನು ಆರಿಸಿದ್ದಾರೆ. ಇದರಿಂದಾಗಿ ಹುಲಿಬೈಲನ್ನು ನಾವು ದೇಶದ ಒಳಿತಿಗಾಗಿ ತೆರವುಗೊಳಿಸಬೇಕಿದೆ. ನಮಗೆ ಸರಕಾರವು ಕಣಿವೆಯ ಕೆಳತುದಿಯಲ್ಲಿರುವ 'ಜಮಗೆ' ಮಜಿರೆಯಲ್ಲಿ ಪುನರ್ವಸತಿ ಕಲ್ಪಿಸಲಿದೆಯಂತೆ" ಎಂದು ನೋಟಿಸನ್ನು ಓದಿ ಹೇಳಿದರು. ಬರಸಿಡಿಲಿನಂತೆ ಬಂದೆರಗಿದ ಸರಕಾರದ ಆದೇಶಕ್ಕೆ ಗ್ರಾಮಸ್ಥರು ಹೌಹಾರಿ ತಮ್ಮ ತಲೆಯಮೇಲೆ ಕೈಯಿಟ್ಟುಕೊಂಡರು. ನಾಲ್ಕಾರು ತಿಂಗಳುಗಳ ನಂತರ ಗ್ರಾಮಸ್ಥರು ಗ್ರಾಮ ತೆರವುಗೊಳಿಸುವ ಮುನ್ನ ತಮ್ಮ ಆರಾಧ್ಯ ದೈವ ಹುಲಿಬೈಲಿನ

ರಾಮಲಿಂಗೇಶ್ವರನಿಗೆ ಕೊನೆಯ ಪೂಜೆ ಸಲ್ಲಿಸಿ ಗಂಟು ಮೂಟೆ, ಜಾನುವಾರುಗಳೊಂದಿಗೆ ಭಾರವಾದ ಹೃದಯಗಳಿಂದ ಜಮಗೆ ಮಜಿರೆಗೆ ತೆರಳಿದರು. ಊರಿಗೆ ಊರೇ ಖಾಲಿಯಾಯಿತು.

ಹುಲಿಬೈಲಿನ ನಿವಾಸಿಗಳು ಜಮಗೆ ಮಜಿರೆಗೆ ಸ್ಥಳಾಂತರಗೊಂಡ ಕೆಲವರುಷಗಳಲ್ಲೇ ಯೋಜನೆಯ ಕಾಮಗಾರಿ ಇಲ್ಲಿ ಪ್ರಾರಂಭವಾಯಿತು. ದೇಶದ ವಿವಿಧೆಡೆಯಿಂದ ಸಾವಿರಾರು ಕಾರ್ಮಿಕರು ಹಾಗೂ ಅಧಿಕಾರಿಗಳು ಬಂದು ನಾನು ಹರಿಯುವ ಸುತ್ತಮುತ್ತಲೂ ನಾಗರಿಕ ಸೌಲಭ್ಯಗಳಿಂದ ಸುಸಜ್ಜಿತವಾದ ಭವ್ಯ ಬಡಾವಣೆಯೊಂದನ್ನು ಕಟ್ಟಿಕೊಂಡು ವಾಸಮಾಡತೊಡಗಿದರು. ಹುಲಿಬೈಲಿಗೆ 'ನಿಸರ್ಗಮನೆ' ಎಂಬ ಆಕರ್ಷಕ ಹೆಸರಿಟ್ಟು ಮರುನಾಮಕರಣ ಮಾಡಿಕೊಂಡು ಹುಲಿಗಳ ಸಂಚಾರವನ್ನು ನಿರ್ಬಂಧಿಸಲು ಬಡಾವಣೆಯ ಸುತ್ತ ಪಗಾರ ಕಟ್ಟಿಕೊಂಡರು. ರಾಮಲಿಂಗೇಶ್ವರನ ಪ್ರಾಚೀನ ಶಿಲೆಯ ಲಿಂಗವನ್ನು ಬದಲಿಸಿ ಹೊಸ ಕೆತ್ತನೆಯ ಲಿಂಗವನ್ನು ಪಟ್ಟಣದಿಂದ ಕರೆತಂದ ಪುರೋಹಿತರ ಮಂತ್ರಘೋಷಗಳ ನಡುವೆ ಪ್ರತಿಷ್ಠಾಪಿಸಿದರು; ಪೂಜೆಗಾಗಿ ಹೊಸ ಪೂಜಾರಿಯನ್ನು ನೇಮಿಸಿದರು.

ನನ್ನ ಸುತ್ತಮುತ್ತ ಬರೀ ಹೊಸಬರನ್ನು ನೋಡಿ ನಾನು ತುಸು ಹೆದರಿದ್ದೆ; ಮುಗ್ಧ ಗ್ರಾಮಸ್ಥರಿಲ್ಲದ ಮೊದ ಮೊದಲಿನ ದಿನಗಳು ನನಗೂ ಬೇಸರ ತಂದವು. ಆಗಾಗ ಗುಡಿಯ ಭಜನೆಯಲ್ಲಿ ಬಾರಿಸುತ್ತಿದ್ದ ಗುಮಟೆಪಾಂಗ್ ವಾದನದ ಧ್ವನಿ ಕೇಳಿಸಿದಂತಾಯಿತು. ರೈತರಿದ್ದಾಗ ಹೊಲಗಳಲ್ಲಿನ ಭತ್ತದ ತೆನೆಗಳು ಒಡೆದು ಮಂದ ಗಾಳಿಗೆ ಅತ್ತಿಂದಿತ್ತ ಓಲಾಡಿದಾಗ ಬರುತ್ತಿದ್ದ ಸಜೀವ ಸಸ್ಯ ಪರಿಮಳ ಇಲ್ಲವಾಗಿತ್ತು. ನನ್ನ ಪಾಡಿಗೆ ಹರಿಯುತ್ತಿದ್ದ ನನ್ನ ಸಹಜ ಲಯ ದಬಿಗಳನ್ನು ಹಾಳುಗೆಡವದೆ ತಮ್ಮ ಕೃಷಿ ಕಾಯಕವನ್ನು ಮಾಡಿಕೊಂಡು ಜೀವನ ಸಾಗಿಸುತ್ತಿದ್ದ ಅವರ ಶಾಂತಚಿತ್ತ ಮುಖಗಳ ನೆನೆಪುಗಳು ಹೃದಯದ ಆಳದಲ್ಲಿ ಒತ್ತರಿಸಿ ಬರತೊಡಗಿದ್ದವು. ದಿನಗಳು ಕಳೆದಂತೆ ದೇಶಕ್ಕೆ ಬೆಳಕನ್ನು ನೀಡಬಂದ ನಿಸರ್ಗಮನೆಯ ಹೊಸ ಹೊಸ ಮುಖಗಳಿಗೆ ಹೊಂದಿಕೊಂಡು ಅವರ ಓಡಾಟ, ನಲಿದಾಟ ಹಾಗೂ ಚಟುವಟಿಕೆಗಳಲ್ಲಿ ಭಾಗಿಯಾಗುತ್ತಾ ಖುಷಿಪಡಲು ಪ್ರಯತ್ನಿಸತೊಡಗಿದೆ. ನೌಕರರೂ ಕೂಡಾ ನನ್ನ ಸೌಂದರ್ಯಕ್ಕೆ ಮಾರುಹೋಗಿ ನನ್ನನ್ನು ಹೆಚ್ಚಿಗೆ ಕಾಡದೆ, ತಾವು ಹಾದಾಡಲು ಬೇಕಾದಷ್ಟೆ ಸೇತುವೆಗಳನ್ನು ಕಟ್ಟಿಕೊಂಡರು; ನನ್ನಲ್ಲಿರುವ ಸಸ್ಯರಾಶಿ, ಪ್ರಾಚೀನ ಶಿಲೆಗಳಿಗೆಲ್ಲ ಕೈಹಾಕದೆ ನನ್ನ ರೂಪಕ್ಕೆ ಯಾವುದೇ ಚ್ಯುತಿ ತರಲಿಲ್ಲ. ಪಕ್ಕದಲ್ಲಿ ಉದ್ಯಾನವನಗಳನ್ನು ನಿರ್ಮಿಸಿದರು. ಅಲ್ಲಿ ಆಟವಾಡುತ್ತಿದ್ದ ಪುಟ್ಟ ಮಕ್ಕಳ ಕಲವರದೊಂದಿಗೆ ನಾನು ನಲಿದೆ.



ನಾನೊಂದು ಮಧ್ಯಮಗಾತ್ರದ ತೊರೆಯಾದರೂ ಹುಲಿಬ್ಯೆಲಿನ ಜೀವವೈವಿಧ್ಯತೆಯ ತೊಟ್ಟಿಲಾಗಿ ಅಸಂಖ್ಯಾತ ಜೀವಿಗಳಿಗೆ ತವರಾಗಿದ್ದೆ. ಮೀನು, ಏಡಿ, ಹಾವು, ಕಪ್ಪೆಗಳು ನನ್ನಲ್ಲಿರುವ ಜಲರಾಶಿ, ಕಲ್ಲುಚಪ್ಪಡಿ ಹಾಗೂ ಮರಳಿನಲ್ಲಿ ನೆಲಸಿದ್ದವು. ನನ್ನ ಎರಡೂ ಬದಿಗಳಲ್ಲಿ ಹೊಳೆ ಮತ್ತಿ, ಕರಿ ಮತ್ತಿ, ಬಿಳಿ ಮತ್ತಿ, ಹೊಳೆ ದಾಸವಾಳ, ಕವಲು, ಕದಂಬ, ಹೊನ್ನೆ, ಬೀಟೆ, ನಂದಿ, ಶಿವಣೆ, ಅರಳಿ, ಅತ್ತಿ, ಆಲ, ಅರಿಷಿಣ, ಬೆತ್ತ, ಬಿದಿರು, ಕಣಗಲೆ, ಕಾಸರಕ, ಮುರಗಲು, ಅಪ್ಪೆ ಮುಂತಾದ ಗಿಡಮರಗಳಲ್ಲಿ ಹೂವು ಹಣ್ಣುಗಳು ತುಂಬಿರುತ್ತಿದ್ದವು. ಸಿಳ್ಳಾರ, ಹರಟೆಮಲ್ಲ, ಕುಟ್ರ, ಪಿಕಳಾರ, ಬೇಲಿಚಟಕ, ಕೆಂಬೂತ, ಬೆಳವ, ಕಾಜಾಣ, ಬದನಿಕೆ, ನೊಣಹಿಡುಕ, ಮಂಗಟ್ಟೆ, ಮಧುರಕಂಠ, ಮಿಂಚುಳ್ಳಿ, ಕೈರಾತ, ಎಲೆಹಕ್ಕಿ, ರಾಜಹಕ್ಕಿ, ಮರಗುಬ್ಬಿ, ಗೂಬೆ, ಹಾಲಕ್ಕಿ, ನವರಂಗ ಮುಂತಾದ ಹಕ್ಕಿಗಳ ಇಂಚರ ಎಲ್ಲೆಡೆ ಮಾರ್ಧನಿಸುತ್ತಿತ್ತು. ಮೀನು ಹಿಡಿಯುವ, ಹಣ್ಣುಗಳನ್ನು ತಿನ್ನುವ, ಕಪ್ಪೆಗಳನ್ನು ಹಾಗೂ ಹುಳು ಹುಪ್ಪಟ್ಟೆಗಳನ್ನು ನುಂಗುವ ಹಕ್ಕಿಗಳ ಚಟುವಟಿಕೆಗಳು ಎಡಬಿಡದೆ ಸಾಗುತ್ತಿದ್ದವು. ಅವುಗಳು ಗೂಡು ಕಟ್ಟುವುದು, ಬಾಣಂತನ ಮಾಡುವುದು ಎಲ್ಲವೂ ನನ್ನ ನಿಸರ್ಗದಲ್ಲಿ, ಯಾವುದೇ ತೊಂದರೆಗಳಿಲ್ಲದೆ ನಡೆಯುತ್ತಿತ್ತು. ಚಳಿಗಾಲದಲ್ಲಿ ಹಿಮಾಲಯದ ತಪ್ಪಲಿನಿಂದಲೂ ಅನೇಕ ಬಗೆಯ ವಲಸೆ ಹಕ್ಕಿಗಳು ಬಂದು ನೆಲೆಸುತ್ತಿದ್ದವು. ನನ್ನ ಇಕ್ಕೆಲಗಳಲ್ಲಿನ ಬೃಹತ್ ಮರಗಳಲ್ಲಿ ಹಾಗೂ ಬದುಗಳಲ್ಲಿ ವಿಸ್ಮಯಕಾರಕ ಅಸಂಖ್ಯಾತ ಜೇಡಗಳು ಬಲೆ ನೇಯ್ದು ಚಿಟ್ಟೆ-ಪತಂಗಗಳನ್ನು ಹೀರಲು ಕಾಯುತ್ತಿದ್ದವು; ವಿವಿಧ ನಮೂನೆಗಳ ಕಪ್ಪೆಗಳು ಮೊಟ್ಟೆಗಳನ್ನಿಟ್ಟು ಹರುಷದಿಂದ ಕುಪ್ಪಳಿಸುತ್ತಿದ್ದವು.



ಹೀಗೆ ಹತ್ತಾರು ವರುಷಗಳು ಸಾಂಗವಾಗಿಯೇ ಸಾಗಿದವು ಎನ್ನಿ. ನೀರು ಹಾಗೂ ವಿಶ್ರಾಂತಿಗಾಗಿ ಬರುತ್ತಿದ್ದ ಜಿಂಕೆ, ಚಿರತೆ, ಹುಲಿ ಇತ್ಯಾದಿ ಕಾಡು ಪ್ರಾಣಿಗಳು ಬಡಾವಣೆಯ ಸುತ್ತ ಕಟ್ಟಿದ್ದ ಆವರಣದ ಕಾರಣ ಬರುವುದನ್ನು ನಿಲ್ಲಿಸಿದ್ದು ಬಿಟ್ಟರೆ ಇನ್ನಿತರ ವನ್ಯಮೃಗಗಳು ಹಾಗೂ ಇತರ ಜೀವ ಸಂಕುಲಕ್ಕೆ ನಾನು ಅಲ್ಲಿಯವರೆಗೆ ಸಂಪೂರ್ಣವಾಗಿ ತೆರೆದುಕೊಂಡಿದ್ದೆ. ನನ್ನಲ್ಲಿನ ಜೀವಸೆಲೆಯಲ್ಲಿ ಅಪೂರ್ವ ಜೀವಿಗಳಾದ ಹಾರುವ ಅಳಿಲು, ಹಾರುವ ಓತಿ, ಖಗಸಂಕುಲದ ದೊಡ್ಡ ದಾಸಮಂಗಟ್ಟೆ, ಕಾಕರಣೆ ಹಾಗೂ ಕಪ್ಪೆಬಾಯಿ ಹಕ್ಕಿಗಳು ಇದ್ದವು. ನಾನು ಹರಿಯುವ ದಾರಿಯಲ್ಲಿ ನೌಕರರು ಒಡ್ಡನ್ನು ಕಟ್ಟಿ ಚಿಕ್ಕ ಈಜುಕೊಳ ನಿರ್ಮಿಸಿ ಮನಸಿಚ್ಛೆ ಆಡಿ ನಲಿದಾಡುತ್ತಿದ್ದರು; ಪುಟಾಣಿ ಮಕ್ಕಳು ನನ್ನ ಥಳಕು ಬಳುಕುಗಳನ್ನು, ಪುಟಿದೇಳುವ ಚಿಕ್ಕ ಚಿಕ್ಕ ತಡಸಲುಗಳನ್ನು ನೋಡಿ ಸಂತೋಷ ಪಡುತ್ತಿದ್ದರು. ಹರಿಯುವ ನೀರಿನಲ್ಲಿ ಮಕ್ಕಳು ಅತ್ತಿಂದಿತ್ತ ಓಡಾಡಿ ನಲಿದಾಡುತ್ತಿದ್ದರು. ಕೆಲ ನಿವಾಸಿಗಳು ನನ್ನ ಒಡಲಲ್ಲಿರುವ ಸ್ವಾದಿಷ್ಟವಾದ ಏಡಿ ಹಾಗೂ ಮೀನುಗಳನ್ನು ಹಿಡಿದು ತಿಂದು ಖುಷಿಪಡುತ್ತಿದ್ದರು; ಇನ್ನೂ ಕೆಲವರು ಕಳಲೆ, ಮರಕೆಸು, ಅಪ್ಪೆಮಿಡಿ ಹಾಗೂ ಇನ್ನಿತರ ಕಾಡುಹಣ್ಣುಗಳನ್ನು ತಿಂದು ಸಂತೃಪ್ತರಾಗಿ ಹೋಗುತ್ತಿದ್ದರು.

ಹೀಗಿರಲು ಬರಬರುತ್ತಾ ಬಡಾವಣೆಯ ನಾಗರಿಕರಿಗೆ ಏನಾಯ್ತೋ ಏನೋ ಅವರ ಜೀವನಕ್ರಮಗಳಲ್ಲಿ ನನ್ನ ಅರಿವಿಗೆ ತಾಗದಂತಹ ತುಂಬಾ ಬದಲಾವಣೆಗಳು ಪ್ರಾರಂಭವಾದವು. ಅವರ ಬದುಕಿನಲ್ಲಿ ಒಂದು ಮಿತಿ ಮೀರಿದ ಸಮೃದ್ಧಿ ಬಂದಂತಿತ್ತು; ಅವರ ವರ್ತನೆಯಲ್ಲಿ ಒಂದು ತರನ ಸೊಕ್ಕು ಕಾಣಿಸತೊಡಗಿತ್ತು. ಇದರ ಸಾಂಕೇತಿಕ ಆರಂಭದಂತೆ ಒಂದು ದಿನ ನನ್ನೊಳಗೆ ಒಂದು ಸ್ಫೋಟಕ ಸಿಡಿಸಲಾಯಿತು; ಅದು ಮೀನು ಏಡಿಗಳನ್ನು ದೊಡ್ಡ ಪ್ರಮಾಣದಲ್ಲಿ ಹಿಡಿದು ಸಂಗ್ರಹಿಸುವ ಹೊಸ ವಿಧಾನವಂತೆ. ನಂತರದಲ್ಲಿ ತಿಂದುಳಿದ ಆಹಾರವನ್ನು ಪ್ಲಾಸ್ಟಿಕ್ ಕೈಚೀಲಗಳ ಸಮೇತ ನನ್ನ ಒಡಲಿಗೆ ಹಾಕುವ ಪರಿಪಾಠ ಆರಂಭವಾಯಿತು. ತಮಗೆ ಬೇಡವಾದ ಹಳೆಯ ದೇವರಪಟಗಳನ್ನು, ಬಲ್ಬು, ಟ್ಯೂಬ್, ಗಾಜು, ಪ್ಲಾಸ್ಟಿಕ್ ಇತ್ಯಾದಿ ತ್ಯಾಜ್ಯವಸ್ತುಗಳನ್ನು ನನ್ನೊಳಕ್ಕೆ ಬಿಸಾಕಲು ಪ್ರಾರಂಭಿಸಿದರು. ಮನೆಗಳ ಕೊಳಚೆಯ ಕೊಳವೆಗಳು ಅನೇಕ ಕಡೆ ಒಡೆದು, ಸೋರಿ ನಾನು ಮಲಿನಳಾದೆ. ಆದರೂ ನನ್ನನ್ನು ನೋಡಲು ಹೊಸ ಜನ ಬರತೊಡಗಿದರು; ಅದು ದೂರದೂರದ ಊರುಗಳಿಂದ, ಕ್ರಮೇಣ ಅವರಿಗಾಗಿ ಉಳ್ಳವರು ಬಾಡಿಗೆ ಕುಟೀರಗಳನ್ನು ಕಟ್ಟತೊಡಗಿದರು. ಈ ಸಂದರ್ಭದಲ್ಲಿ ಅಪೂರ್ವ ಸಸ್ಯರಾಶಿಯನ್ನು ಹಾಗೂ ಗಿಡಮೂಲಿಕೆಗಳನ್ನು ಕಸವೆಂದು ತಿಳಿದು ಕಿತ್ತರು. ಇಷ್ಟು ಸಾಲದೆಂಬಂತೆ ಕಲ್ಲು ಚಪ್ಪಟೆಗಳನ್ನು ಹಾಗೂ ಮರಳನ್ನು ಸಿಕ್ಕ ಸಿಕ್ಕ ಹಾಗೆ ನನ್ನಿಂದ ಕಿತ್ತೊಯ್ದರು. ದಿನಾಚರಣೆಗಳನ್ನು ಆಚರಿಸವ ನೆಪದಲ್ಲಿ ಸಿಡಿಯುತ್ತಿದ್ದ ಭಾರಿ ಪಟಾಕಿಗಳ ಸದ್ದಿಗೆ ನನ್ನೊಡಲಿನ ಸೂಕ್ಷ್ಮ ಜೀವ ಸಂಕುಲವು ಬೆದರಿ ಚೆಲ್ಲಾಪಿಲ್ಲಿಯಾಗತೊಡಗಿತು.



ಇದೆಲ್ಲದರ ಪರಿಣಾಮವಾಗಿ ನಾನು ಈವರೆಗೆ ಒಳಗಾಗದ, ನನ್ನ ಜೀವವನ್ನೇ ಬುಡಸಮೇತ ಅಲುಗಾಡಿಸಿದ ಅಸ್ವಸ್ಥತೆಯೊಂದು ನನ್ನನು ಕಾಡತೊಡಗಿತು. ನನ್ನ ಹರಿವಿನ ಓಘ ವಿಚಲಿತಗೊಂಡು ಬೇಸಿಗೆಯಲ್ಲಿ ಬೇಗ ಬತ್ತತೊಡಗಿದೆ. ಕೆಂದಳಿಲು, ಮಂಗಟ್ಟೆಗಳು ಹಾಗೂ ಕೋತಿಗಳು ಹಣ್ಣುಗಳನ್ನು ತಿಂದು ಮಾಡಿದ ಬೀಜ ಪ್ರಸರಣದ ಫಲವಾಗಿ ಚಿಗಿತ ಚಿಕ್ಕಪುಟ್ಟ ಸಸಿಗಳು, ಪರ್ಣಪಾತಿಗಳು, ಕಾಡುಹಣ್ಣುಗಳ ಗಿಡಬಳ್ಳಿಗಳು ವ್ಯಾಪಾರದ ಕತ್ತಿಗಳಿಗೆ ನಿರಂತರವಾಗಿ ಬಲಿಯಾದ ಕಾರಣ ನಾನು ಕೃಶಳಾಗುತ್ತಾ ಹೋಗಿ ಅನೇಕ ಪಕ್ಷಿಗಳು, ಸಸ್ತನಿಗಳು, ಸರಿಸೃಪಗಳು, ಚಿಟ್ಟೆ, ಪತಂಗಗಳು, ಕಪ್ಪೆಗಳು, ಜೇಡಗಳು ಎಲ್ಲವೂ ನನ್ನಿಂದ ದೂರ ಸರಿಯುತ್ತಿವೆ. ಮರಗಳ ದಟ್ಟಣೆ ಕಡಿಮೆಯಾಗಿ ಹಾರುವ ಓತಿ ಹಾಗೂ ಹಾರುವ ಹಾವುಗಳು ಅಳಿದುಹೋಗುವ ಹಂತಕ್ಕೆ ಬಂದು ನಿಂತಿವೆ. ಮಾಲಿನ್ಯವು ಹಕ್ಕಿಗಳ ವಂಶಾಭಿವೃಧ್ಧಿಯನ್ನು ಕುಂಠಿತಗೊಳಿಸಿದೆ. ಸುತ್ತಲಿದ್ದ ಬೃಹತ್ ಗಾತ್ರದ ಮರಗಳು ಅಕಾಲ ಮರಣವನ್ನಪ್ಪಿವೆ. ಹೀಗೆ ಎಲ್ಲ ಸಂಪತ್ತನ್ನೂ ಕಳೆದುಕೊಂಡು ಒಣಗುತ್ತಿರುವ ನನ್ನ ಬಳಿ ಈಜಲೂ ಕೂಡ ಜನ ಬರುತ್ತಿಲ್ಲ; ಕುಣಿದು ಕುಪ್ಪಳಿಸುತ್ತಿದ್ದ ಕಪ್ಪೆಗಳು ಮಾಯವಾಗಿವೆ. ಜೀವ ಸಂಸರ್ಗವೇ ಇಲ್ಲದೆ ನನಗೆ ಹುಚ್ಚು ಹಿಡಿದಂತಾಗಿದೆ.

ಈ ಸ್ಮಶಾನ ಮೌನದ ನಡುವೆ ಎಲ್ಲಿಂದಲೋ ನನ್ನ ಪುನರುಜ್ಜೀವನಕ್ಕಾಗಿ ಕೋಟ್ಯಾಂತರ ರೂಪಾಯಿಗಳ ವೆಚ್ಚದ ಯೋಜನೆಯೊಂದು ಸಿದ್ಧವಾಗುತ್ತಿದೆ ಎಂದು ಕೇಳಿದೆ. ಮನುಷ್ಯರು ನಾನು ಮೌನವಾಗಿ ಸಾಯಲೂ ಬಿಡಲೊಲ್ಲರಲ್ಲ, ಇವರಿಗೆ ಹತ್ತಿರುವ ರೋಗವಾದರೂ ಯಾವುದೆಂದು ನಾನು ಆಶ್ಚರ್ಯಪಡುತ್ತಿದ್ದೇನೆ.




**ಲೇಖನ:** **ಮಹಾಂತೇಶ, ಕೈಗಾ**
**ಉತ್ತರ ಕನ್ನಡ ಜಿಲ್ಲೆ**




# ಇಲಿ ಮತ್ತು ಹೆಗ್ಗಣಗಳನ್ನು ತಿನ್ನುವ ಮಾಂಸಾಹಾರಿ ಸಸ್ಯಗಳು

ಈ ಭೂಮಿಯು ಹಲವು ವೈಶಿಷ್ಟ್ಯಗಳ ಆಗರ ಎಂದರೆ ತಪ್ಪಾಗದು. ಏಕೆಂದರೆ, ಈ ಭೂಮಿಯಲ್ಲಿ ಸಸ್ಯಗಳು ಮಣ್ಣಿನಲ್ಲಿರುವ ಪೋಷಕಾಂಶಗಳನ್ನು ಬಳಸಿಕೊಂಡು ಜೀವಿಸುತ್ತವೆ, ಎನ್ನುವುದು ಎಲ್ಲರಿಗೂ ತಿಳಿದಿದೆ. ಆದರೆ ಕೆಲವೇ ಕೆಲವು ವಿಧದ ಸಸ್ಯಗಳು ತಮಗೆ ಮಣ್ಣಿನಲ್ಲಿ ಸಾಕಷ್ಟು ಪೋಷಕಾಂಶಗಳು ದೊರೆಯದಿದ್ದಾಗ ಪರಭಕ್ಷಕ ಮತ್ತು ಮಾಂಸಾಹಾರಿಗಳಾಗುತ್ತವೆ ಎಂದರೆ ನಂಬುತ್ತೀರಾ? ಹೌದು, ಕೆಲವೇ ಕೆಲವು ಪ್ರಭೇದದ ಸಸ್ಯಗಳು ಮಾಂಸಾಹಾರಿಗಳಾಗಿರುವುದು ಪ್ರಕೃತಿಯ ವಿಸ್ಮಯಗಳಲ್ಲಿ ಒಂದು. ನೋಡಲು ಆಕರ್ಷಕವಾಗಿ ಇರುವ ಇವುಗಳು ಕ್ರಿಮಿಕೀಟಗಳು ಮತ್ತಿತರ ಜೀವಿಗಳನ್ನು ತಮ್ಮೆಡೆಗೆ ಆಕರ್ಷಿಸಿ ತಿನ್ನುತ್ತವೆ. ಇವುಗಳನ್ನು *"ಕಾರ್ನಿವೋರಸ್ ಪ್ಲಾಂಟ್‌ಗಳು"* ಎಂದು ಕರೆಯುತ್ತಾರೆ. ಈ ಸಸ್ಯಸಂಕುಲಗಳು ಕ್ರಿಮಿಕೀಟಗಳು ಮತ್ತಿತರ ಜೀವಿಗಳನ್ನು ಆಕರ್ಷಿಸಿ ತಿನ್ನುವುದಲ್ಲದೇ ಇವುಗಳಲ್ಲಿ ಕೆಲವು ಗಿಡಗಳು ತಮಗೆ ಯಾರಾದರೂ ತೊಂದರೆ ನೀಡಿದರೆ ಅವರಿಗೆ ಕಚ್ಚುತ್ತವೆ.

ಮಾಂಸವನ್ನೇಕೆ ಇವು ಭಕ್ಷಿಸುತ್ತವೆ?




ಮಣ್ಣು ತುಂಬಾ ನಿಸ್ಸಾರವಾಗಿರುವ (ಪೌಷ್ಟಿಕಾಂಶ ಇಲ್ಲದ), ಅದರಲ್ಲೂ ಸಾರಜನಕದ ಅಂಶವಿಲ್ಲದಿರುವ ಜೌಗು ಪ್ರದೇಶದಲ್ಲಿ ಮಾಂಸಾಹಾರಿ ಸಸ್ಯಗಳು ಕಂಡುಬರುತ್ತವೆ. ಈ ರೀತಿಯ ಮಾಂಸಾಹಾರಿ ಸಸ್ಯಗಳ ಕುರಿತು ಮೊದಲ ಬಾರಿಗೆ ಅಧ್ಯಯನ ಮಾಡಿ ಪುಸ್ತಕ ಬರೆದ ವಿಜ್ಞಾನಿ ಚಾರ್ಲ್ಸ್ ಡಾರ್ವಿನ್. ಈ ವರ್ಗದ ಸಸ್ಯಗಳು ಕೀಟಗಳ ಮಾಂಸವನ್ನು ಆಹಾರವಾಗಿ ಸೇವಿಸುವುದಿಲ್ಲ. ಇತರ ಸಸ್ಯಗಳಂತೆ ಇವುಗಳೂ ದ್ಯುತಿಸಂಶ್ಲೇಷಣೆಯ ಮೂಲಕವೇ ಆಹಾರ ಉತ್ಪಾದಿಸುತ್ತವೆ. ಆದರೆ ಮಾಂಸಾಹಾರಿ ಸಸ್ಯಗಳು ತಾವು ಪಡೆದ ಮಾಂಸಾಹಾರದ ಸಹಾಯದಿಂದ ಸಾರಜನಕ ಮತ್ತು ರಂಜಕ ಅಂಶಗಳನ್ನು ಪಡೆದುಕೊಂಡು ತಮ್ಮ ದ್ಯುತಿಸಂಶ್ಲೇಷಣಾ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುತ್ತವೆ. ದಕ್ಷಿಣ ಅಮೆರಿಕಾ, ಕ್ಯಾಲಿಫೋರ್ನಿಯಾ, ಕೆನಡಾ, ಆಸ್ಟ್ರೇಲಿಯಾಗಳಲ್ಲೆಲ್ಲಾ ಬೃಹತ್ ಪ್ರಮಾಣದಲ್ಲಿ ಕಾಣಿಸುವ ಈ ಸಸ್ಯಗಳ ಹಲವು ಪ್ರಭೇದಗಳು ಈಶಾನ್ಯ ಭಾರತದ ರಾಜ್ಯಗಳಲ್ಲೂ ಇವೆ.









ಮಾಂಸಭಕ್ಷಕ ಗಿಡಗಳನ್ನು ಬೆಳಸುವುದು ಸುಲಭ. ಇವು ಮಣ್ಣಿನ ಅತ್ಯಂತ ಕಡಿಮೆ ಪೋಷಕಾಂಶದೊಂದಿಗೆ ಬದುಕುತ್ತವೆ. ಕ್ರಿಮಿಕೀಟಗಳು, ಇಲಿ-ಹೆಗ್ಗಣಗಳು ಇವುಗಳ ಪ್ರಮುಖ ಆಹಾರ. ಇವು ಮನುಷ್ಯನ ಮಾಂಸವನ್ನು ತಿನ್ನುವುದಿಲ್ಲ ಎನ್ನುವುದು ಸಂಶೋಧನೆಗಳಿಂದ ಸಾಬೀತಾಗಿದೆ. ಮಾಂಸಾಹಾರಿ ಸಸ್ಯಗಳು ಎಂದ ಕೂಡಲೇ ಇವುಗಳು ಪ್ರಾಣಿಗಳನ್ನೆಲ್ಲಾ ಬೇಟೆಯಾಡಿ ತಿನ್ನುತ್ತವೆ ಎಂದು ಅರ್ಥವಲ್ಲ. ಇವು ತೀರಾ ಸಣ್ಣ ಗಾತ್ರದ ನೊಣ, ದುಂಬಿ, ಜಿರಳೆ, ಮಿಡತೆ ಇತ್ಯಾದಿಗಳನ್ನು ತಿನ್ನುತ್ತವೆ. ಆದರೆ ಕಪ್ಪೆ, ಹಲ್ಲಿ, ಓತಿಕ್ಯಾತ ಮುಂತಾದ ಮಧ್ಯಮ ಗಾತ್ರದ ಪ್ರಾಣಿಗಳನ್ನೂ ತಿನ್ನುವ ಸಸ್ಯಗಳೂ ಇವೆ. ಬಹುಮಟ್ಟಿಗೆ ಈ ಸಸ್ಯಗಳು ಕೀಟಗಳನ್ನೇ ಸೆರೆಹಿಡಿದು ಸೇವಿಸುವುದರಿಂದ ಇವುಗಳಿಗೆ ಕೀಟಾಹಾರಿ ಸಸ್ಯಗಳು ಎನ್ನುವ ಹೆಸರೂ ಇದೆ. ಇವುಗಳಲ್ಲಿ ಅನೇಕ ಪ್ರಭೇದಗಳಿವೆ. ಇಬ್ಬನಿಗಿಡ, ಹೂಜಿಗಿಡ, ನೊಣದ ಬೋನು (ವೀನಸ್ ಫ್ಲೈಟ್ರಾಪ್), ಬ್ಲಾಡರ್ ವರ್ಟ್ ಇತ್ಯಾದಿ. ಜಗತ್ತಿನಲ್ಲಿ ಆರುನೂರಕ್ಕೂ ಹೆಚ್ಚು ವಿಧದ ಮಾಂಸಾಹಾರಿ ಸಸ್ಯಗಳಿವೆ. ಮಾಂಸಾಹಾರಿ ಸಸ್ಯಗಳು ಪ್ರಾಣಿ ಬೇಟೆಯ ಕ್ರಮ ಎಲ್ಲರನ್ನೂ ಬೆರಗುಗೊಳಿಸುತ್ತದೆ. ಅಂತಹ ಕೆಲವು ಸಸ್ಯಗಳು ಇಲ್ಲಿವೆ.

**ಹೂಜಿ ಗಿಡ:**




ಹೂಜಿ ಗಿಡದ ಹೆಸರೇ ಹೇಳುವಂತೆ ಇದರ ಎಲೆಗಳು ಕೊಳವೆಯ ಆಕಾರದ ಉದ್ದ ಕತ್ತಿನ ಮುಚ್ಚಳ ಇರುವ ಹೂಜಿಯಂತೆ ಕಾಣುತ್ತವೆ. ಈ ಸಸ್ಯವು ಹೂಜಿಯಂತೆ ಇರುವ ತೆರೆದ ಅಂಚಿನ ಆಸುಪಾಸು ಆಕರ್ಷಕ ದ್ರವ್ಯವನ್ನು ಹೊರಸೂಸುತ್ತದೆ. ಈ ದ್ರವ್ಯಕ್ಕೆ ಆಕರ್ಷಿತರಾಗಿ ಬರುವ ಕೀಟಗಳು ಹೂಜಿಯಂತಹ ನಳಿಗೆಯ ಒಳಗೆ ಸಿಕ್ಕಿಹಾಕಿಕೊಳ್ಳುತ್ತವೆ. ತನ್ನ ಬೇಟೆಯು ಹೂಜಿಯೊಳಗೆ ಬೀಳುತ್ತಲೇ ಹೂಜಿಯ ಬಾಯಿಯು ತನ್ನಿಂದ ತಾನಾಗಿಯೇ ಮುಚ್ಚಿಕೊಳ್ಳುತ್ತದೆ. ಕಪ್ಪೆ, ಓತಿಕ್ಯಾತ ಮತ್ತು ಹಲ್ಲಿಯೇನಾದರೂ ಇದರ ಹೂಜಿಯೊಳಗೆ ಬಿದ್ದರೆ ಅವುಗಳನ್ನು ಜೀರ್ಣಿಸಿಕೊಳ್ಳುವ ಶಕ್ತಿಯೂ ಈ ಹೂಜಿ ಗಿಡಗಳಿಗೆ ಇವೆ.

**ನೊಣದ ಬೋನು (ವೀನಸ್ ಫ್ಲೈಟ್ರಾಪ್):**

ನೊಣದ ಬೋನು ಸಸ್ಯದ ಎಲೆಗಳು ಇಬ್ಭಾಗಗೊಂಡ ಆಕಾರವಿದ್ದು, ಒಳಗೆ ಮಡಚುವಂತಹ ರಚನೆಯನ್ನು ಹೊಂದಿರುತ್ತವೆ. ಪ್ರತಿ ಎಲೆಯ ಅಂಚಿನಲ್ಲೂ ಸೂಕ್ಷ್ಮಸಂವೇದಿ ತಂತುಗಳಿದ್ದು. ಕೀಟಗಳು ಏನಾದರೂ ಈ ತಂತನ್ನು ಸ್ಪರ್ಶಿಸಿದಲ್ಲಿ, ಆ ಸಸ್ಯದಲ್ಲಿ ವಿದ್ಯುತ್ ಕಾಂತೀಯ ಶಕ್ತಿಯು ಪ್ರವಹಿಸಿ ಕ್ಷಣದಲ್ಲಿ ಎಲೆಗಳನ್ನು ಭದ್ರವಾಗಿ ಮಡಚಿಕೊಂಡು ಅದರೊಳಗೆ ಸಿಲುಕಿಕೊಂಡಿರುವ ಕೀಟಗಳನ್ನು ಜೀರ್ಣಿಸಿಕೊಂಡು ಬಿಡುತ್ತದೆ.


© Venus_Flytrap_showing_trigger_hairs

**ಇಬ್ಬನಿ ಗಿಡ (ಡ್ರಾಸೆರ):**


© Drosera_capensis_bend

ಈ ಗಿಡದ ಎಲೆಗಳ ಸುತ್ತ ತಂತಿಯಂತೆ ಇರುವ ಎಳೆಗಳು ಚಾಚಿಕೊಂಡಿದ್ದು, ಎಳೆಗಳ ತುದಿಯಲ್ಲಿ ದ್ರವರೂಪದ ಅಂಟು ಹನಿ ಜಿನುಗುತ್ತಿರುತ್ತದೆ. ಎಲೆಗಳಲ್ಲಿರುವ ಹನಿಗಳು ಬಿಸಿಲಿನಲ್ಲಿ ಹೊಳೆಯುತ್ತಿರುತ್ತವೆ. ಇಬ್ಬನಿಯ ಹನಿಯಂತೆ ಕಾಣುವ ಈ ಅಂಟನ್ನು ಮಕರಂದವೆಂದು ಭಾವಿಸಿ ಕೀಟಗಳು ಅಂಟಿನ ಮೇಲೆ ಕುಳಿತಾಗ ಅವು ಅಂಟಿಕೊಳ್ಳುತ್ತವೆ. ಕೀಟಗಳು ಇದರಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದೆ ಅಲ್ಲೇ ಬಂಧಿಯಾಗಿ ಇಬ್ಬನಿ ಗಿಡಕ್ಕೆ ಆಹಾರವಾಗುತ್ತವೆ.

**ಗಾಳಿಗುಳ್ಳೆಯ ಗಿಡ:**

ನೀರು ಕುಡಿದ ನಿಷ್ಪ್ರಯೋಜಕ ನೆಲದಲ್ಲಿ ಈ ಸಸ್ಯಗಳು ಬೆಳೆಯುತ್ತವೆ. ಈ ಸಸ್ಯಗಳು ತಮ್ಮ ಬೇಟೆಗಾಗಿ ಹೀರಿಕೊಳ್ಳುವ ನೀರಿನಿಂದ ನಿರ್ವಾತ ಗುಳ್ಳೆಗಳನ್ನು ಸೃಷ್ಟಿಸುತ್ತವೆ. ಕೀಟಗಳು ಈ ಗುಳ್ಳೆಗಳನ್ನು ಸ್ಪರ್ಶಿಸಿದಾಗ, ಈ ಗುಳ್ಳೆಗಳು ಕೀಟಗಳನ್ನು ತನ್ನೊಳಗೆ ಎಳೆದುಕೊಂಡು ತಿನ್ನುತ್ತವೆ.


© Drosera._Phalaenophana


© Drosera._Limonia

ಇವುಗಳ ಬೇಟೆಯ ಬೋನು ಹೇಗೆ ಕೆಲಸ ಮಾಡುತ್ತದೆ?

ಮಾಂಸಾಹಾರಿ ಸಸ್ಯಗಳ ಬೋನಿಗೆ ಯಾವುದೇ ವಸ್ತು ಸೋಕಿದಾಗ ಬೋನಿನ ಒಳಮೈಯಲ್ಲಿರುವ ಕೂದಲುಗಳು ಸಂವೇದನೆಯನ್ನು ಉಂಟುಮಾಡಿ ಬೋನು ಮುಚ್ಚುವಂತೆ ಮಾಡುತ್ತದೆ. ಅಂದರೆ ಈ ಬೋನು ಸಂಪೂರ್ಣವಾಗಿ ಮುಚ್ಚಿಕೊಳ್ಳುವುದಿಲ್ಲ.




ಬೋನಿಗೆ ಬಿದ್ದಿರುವುದು ಕೀಟವಾಗಿದ್ದಲ್ಲಿ ಇಪ್ಪತ್ತು ಸೆಕೆಂಡ್ ಒಳಗಾಗಿ ಮಿಸುಕಾಡಿ ಕೂದಲುಗಳಿಗೆ ಪುನಃ ಸಂವೇದನೆ ಉಂಟುಮಾಡಿದರೆ ಬೋನು ಪೂರ್ತಿಯಾಗಿ ಮುಚ್ಚಿಕೊಳ್ಳುತ್ತದೆ. ಒಂದು ವೇಳೆ ಬೋನಿಗೆ ಬಿದ್ದಿರುವುದು ಕಲ್ಲು ಅಥವಾ ಇಬ್ಬನಿ ಆಗಿದ್ದಲ್ಲಿ ಎರಡನೇ ಸಂವೇದನೆ ಉಂಟಾಗದೇ ಬೋನು ಪೂರ್ತಿ ಮುಚ್ಚುವುದಿಲ್ಲ. ಏಕೆಂದರೆ ಒಂದು ವೇಳೆ ಗಿಡವೇನಾದರೂ ವ್ಯರ್ಥವಾಗಿ (ಬೇಟೆ ದೊರೆಯದೇ) ಮುಚ್ಚಿಕೊಂಡರೆ, ಅದು ಮತ್ತೆ ತೆರೆದುಕೊಳ್ಳಲು ಹಲವು ಗಂಟೆಗಳೇ ಬೇಕಾಗುತ್ತದೆ. ಅದರ ನಂತರವೇ ಆ ಗಿಡವು ಮರು ಬೇಟೆಗೆ ಸಿದ್ಧಗೊಳ್ಳುತ್ತದೆ.

ಮಾಂಸಾಹಾರಿ ಗಿಡಗಳ ವಿವಿಧ ರೀತಿಯ ಬೇಟೆಯಾಡುವ ತಂತ್ರಗಳಿಗೆ ಈ ಮೇಲಿನ ಕೆಲವು ಸಸ್ಯಗಳು ಮತ್ತು ಅವುಗಳ ಬೇಟೆಯ ಕ್ರಮಗಳು ಕೇವಲ ಉದಾಹರಣೆಗಳು ಮಾತ್ರ. ಬೇಟೆಯಲ್ಲಿ ಇಂತಹ ಅನೇಕ ವಿಭಿನ್ನ ರೋಚಕ ವಿಧಾನಗಳನ್ನು ಮಾಂಸಾಹಾರಿ ಸಸ್ಯಗಳು ಅನುಸರಿಸುತ್ತವೆ. ಮಾಂಸವನ್ನು ತಿಂದು ಬದುಕುವ ಮತ್ತು ಮಾಂಸಾಹಾರದ ಸೇವನೆಯ ಮೂಲಕ ತಮ್ಮ ದ್ಯುತಿಸಂಶ್ಲೇಷಣೆಯ ಸಾಮರ್ಥ್ಯವನ್ನು ಮತ್ತಷ್ಟು ಹೆಚ್ಚಿಸಿಕೊಳ್ಳುವ ಮೂಲಕ ಸಸ್ಯ ವರ್ಗಗಳ ಪೈಕಿ, ವಿಭಿನ್ನವಾಗಿ ಈ ಸಸ್ಯಗಳು ಬದುಕುವುದು ವಿಶೇಷ.




**ಲೇಖನ: ಸಂತೋಷ್ ರಾವ್ ಪೆರ್ಮುಡ**
ದಕ್ಷಿಣ ಕನ್ನಡ ಜಿಲ್ಲೆ




**ವಿವಿ ಅಂಕಣ**

# ಮಿಂಚೇ ಮೆಡಿಸಿನ್..!

ಅಂದು ಮಳೆಯ ಸುಳಿವೇ ಇರಲಿಲ್ಲ. ಇದ್ದಕ್ಕಿದ್ದ ಹಾಗೆ ಮೋಡ ಕವಿದ ವಾತಾವರಣ. ಸಂಜೆಯ ಸಮಯ ರಾತ್ರಿಯ ಕತ್ತಲೆಗೆ ಕ್ಷಣಾರ್ಧದಲ್ಲಿ ಒಗ್ಗಿಕೊಂಡಿತು. ಕಂಡೂ ಕಾಣದಂತಹ ಅರೆ ಬೆಳಕು. ತಣ್ಣನೆ ಗಾಳಿ ಬೀಸುವ ಆ ಸಮಯವನ್ನು ಸವಿಯಲೆಂದೇ ಅಯ್ಯಪ್ಪ ಸ್ವಾಮಿ ದೇವಸ್ಥಾನದ ಬಂಡೆಯ ಕಡೆಗೆ ಹೆಜ್ಜೆ ಹಾಕಿದೆ. ಹಾಗೆ ಕೂತು, ಮುಂದಿನ ಗಾಢ ಹಸಿರಿನ ಕಾಡು, ಸ್ತಬ್ದ ಬಂಡೆ, ಮರ-ಗಿಡಗಳ ಮೇಲೆ ಹಾರಿ ಮನೆ ಕಡೆಗೆ ಪಯಣ ಬೆಳೆಸಿದ ಹಕ್ಕಿಗಳ ಸಾಲು, ನೀವೇ ಊಹಿಸಿಕೊಳ್ಳಿ ಎಂದು ಬಿಟ್ಟು ಬಿಟ್ಟಿದ್ದ ಮೋಡಗಳ ಚಿತ್ತಾರ ಎಲ್ಲವೂ ಒಂದು ರೀತಿಯ ಹೊಸ ಪ್ರಪಂಚವನ್ನೇ ಸೃಷ್ಟಿ ಮಾಡಿತ್ತು. ಈ ಪರಿಪೂರ್ಣ ಚಿತ್ತಾರ ನಂದೇ ಎಂದು ಸಾರುತ್ತಾ ಪ್ರಕೃತಿ ಹಾಕುತ್ತಿದ್ದ ಸಹಿ, ಮೋಡಗಳ ಮಧ್ಯೆ ಮೂಡುತ್ತಿದ್ದ ಮಿಂಚು ಹೇಳುತ್ತಿತ್ತು. ಹೀಗೆ ಮೂಡಿದ ಪ್ರಕೃತಿಯ ಚಿತ್ತಾರದ ಮಧ್ಯೆ ಆಗಾಗ್ಗೆ ಮೂಡುತ್ತಿದ್ದ ಈ ಮಿಂಚು ನನ್ನ ಗಮನ ಸೆಳೆಯಿತು. ಮಿಂಚಿನ ವೇಗದಲ್ಲಿ ಬಂದು ಹೋಗುತ್ತಿದ್ದ ಅದನ್ನು ಹೇಗಾದರೂ ಮಾಡಿ ನನ್ನ ಫೋನಿನ ಛಾಯಾಚಿತ್ರದಲ್ಲಿ ಬಂಧಿಸಬೇಕೆಂಬ ಮನಸ್ಸಾಯಿತು. ನನ್ನ ಮನಸ್ಸಿನ ಆಜ್ಞೆಯಂತೇ ಫೋನ್ ತೆಗೆದು, ಅದರಲ್ಲಿನ ಕ್ಯಾಮೆರಾ ಅಪ್ಲಿಕೇಷನ್ ತೆರೆದು ಕಾಯುತ್ತಾ ಕುಳಿತೆ. ಇಷ್ಟು ಹೊತ್ತು ಆಗಾಗ್ಗೆ ಬರುತ್ತಿದ್ದ ಮಿಂಚು ಫೋನ್ ತೆರೆದು ಕಾಯುತ್ತಾ ಕುಳಿತ ತಕ್ಷಣ ಮಾತ್ರ ಸುಳಿವಿಲ್ಲದಂತಾಯ್ತು. ಆದರೂ ತಾಳ್ಮೆ ಕಳೆದು ಕೊಳ್ಳದೆ ಕಾಯುತ್ತಾ ಕುಳಿತೆ. ಮಿಂಚು ಬಂತು, ನಾನು ಬಲಕ್ಕೆ ನೋಡುತ್ತಿದ್ದರೆ ಎಡ ಭಾಗದಲ್ಲಿ ಬರುತ್ತಿತ್ತು. ಎಡಕ್ಕೆ ತಿರುಗಿದರೆ ಬಲ ಭಾಗದಲ್ಲಿ ಬಂದು ಹೋಗುತ್ತಿತ್ತು. ಅಪ್ಪಿ ತಪ್ಪಿ ನಾನು ಕ್ಯಾಮೆರಾ ಹಿಡಿದ ದಿಕ್ಕಿನಲ್ಲೇ ಬಂದರೂ ಎಷ್ಟು ಬೇಗ ಮಾಯವಾಗುತ್ತಿತ್ತೆಂದರೆ, ನಾನು ಫೋಟೋ ಕ್ಲಿಕ್ಕಿಸುವಷ್ಟರಲ್ಲಿ ಕಣ್ಮರೆಯಾಗುತ್ತಿತ್ತು. ಒಂದು ಕ್ಷಣ ಮಿಂಚು ನನ್ನ ಜೊತೆ

ಆಟವಾಡುತ್ತಿದೆಯೇ ಎನಿಸುತ್ತಿತ್ತು. ಇಷ್ಟೆಲ್ಲಾ ಆದರೂ ಧೃತಿಗೆಡದೆ, ಕ್ಯಾಮೆರಾದಲ್ಲಿದ್ದ 'ಬರ್ಸ್ಟ್ ಮೋಡ್' ಬಳಸಿಕೊಂಡು ಸತತ ಪ್ರಯತ್ನ ಮಾಡಿ ಕೆಲವು ಚಿತ್ರಗಳನ್ನು ತೆಗೆದೆನಾದರೂ ಮಿಂಚಿನ ಎಲ್ಲಾ ಭಾಗಗಳು ಬರಲೇ ಇಲ್ಲ. ಕೆಲವಂತೂ ಮೋಡದ ಹಿಂದೆ ಬಚ್ಚಿಟ್ಟುಕೊಂಡು ಬರೀ ಬೆಳಕನ್ನು ಮಾತ್ರ ಬೀರುತ್ತಿತ್ತು. ಸರಿ ಆದದ್ದಾಯಿತು ನಮ್ಮ ಪ್ರಯತ್ನ ನಾವು ಮಾಡಿದ್ದೇವೆ. ಇದರಲ್ಲೇ ಮುಳುಗಿ ಹೋದರೆ ಮುಂದಿದ್ದ ಆ ಚಿತ್ತಾರವನ್ನು ಸವಿಯಲಾಗದೆಂದು ಮನದಟ್ಟಾಗಿ ಫೋನನ್ನು ತೆಗೆದು ಪಕ್ಕಕ್ಕಿರಿಸಿ ಮತ್ತದೇ ಮುಗುಳುನಗೆಯಿಂದ ನೋಡುತ್ತಾ ಕುಳಿತೆ...



ವರುಷಕ್ಕೊಂದು ಬಾರಿ ಬರುವ ಮಳೆಗಾಲದಲ್ಲಿ ಹಾಗೆ ಬಂದು ಹೀಗೆ ಹೋಗುವ ಈ ಮಿಂಚಿನ ಬಗ್ಗೆ ನಮಗೆಷ್ಟು ಗೊತ್ತು? ಬಹುಶಃ ಮಿಂಚು ಹೊಡೆದು ಮರ ಸುಟ್ಟು ಹೋಯಿತು, ಬಯಲಿನಲ್ಲಿದ್ದ ರೈತನಿಗೆ ಮಿಂಚು ಹೊಡೆಯಿತಂತೆ ಎಂಬ ಮಾಧ್ಯಮ ಸುದ್ದಿಗಳು. ಕೆಲವರು ಮಿಂಚಿನ ಜೊತೆ ಅನುಭವಗಳನ್ನೂ ಹಂಚಿಕೊಂಡಿರಬಹುದು. ನನಗಿನ್ನೂ ನೆನಪಿದೆ ನನ್ನ ತಂದೆ ಯಾವಾಗಲೂ ಹೇಳುವರು, ಮಳೆ ಬರುವ ಸಮಯದಲ್ಲಿ ಮರಗಳ ಕೆಳಗೆ ನಿಲ್ಲಬಾರದು, ವಿದ್ಯುತ್ ಕಂಬಗಳ ಬಳಿ ಇರಬಾರದು. ಸಾಧ್ಯವಾದರೆ ಯಾವುದಾದರೂ ಕಟ್ಟಡದ ಒಳಗೆ ಸೇರಿಕೊಳ್ಳಬೇಕು ಎಂದು. ನಮ್ಮಮ್ಮ ಒಮ್ಮೆ ಹೇಳಿದ ನೆನಪು, ಇಂದ್ರನು ತನ್ನ ಬಿಳಿ ಆನೆಯ ಮೇಲೇರಿ ಹೋಗುವಾಗ ಆನೆಗೆ ಬೀಸುವ ಚಾಟಿಯ ಏಟಿಗೆ ಬರುವ ಬೆಳಕೇ ಮಿಂಚು, ಶಬ್ದ ಗುಡುಗು ಎಂದು. ಪ್ರಾರಂಭದಲ್ಲಿ ನಾನೂ ಹಾಗೆ ಊಹಿಸಿಕೊಳ್ಳುತ್ತಿದ್ದೆ, ಚೆನ್ನಾಗಿರುತ್ತಿತ್ತು. ತರಗತಿಗಳು ಬದಲಾದಂತೆ ವಿಜ್ಞಾನವು , ಧನಾತ್ಮಕ ಮತ್ತು ಋಣಾತ್ಮಕದ ಸಮ್ಮಿಲನದ ಪರಿಣಾಮವೇ ಮಿಂಚು ಎಂಬ ವಾಸ್ತವವನ್ನು ತಿಳಿಸಿ, ಮಿಂಚಿನ ಬಗ್ಗೆ ನನಗಿದ್ದ ಪೌರಾಣಿಕ ಚಿತ್ರಣವನ್ನು ಸಂಪೂರ್ಣವಾಗಿ ಹಾಳು ಮಾಡಿತು. ಆದದ್ದು ಆಯಿತು. ವಿಜ್ಞಾನವೇ ಹಾಗೆ ಕೆಲವೊಮ್ಮೆ ನಾವು ಇದೇ ಸತ್ಯ ಎಂದು ತಿಳಿದುಕೊಂಡಿದ್ದರೆ ಅದನ್ನು ಸುಳ್ಳು ಮಾಡಿಬಿಡುತ್ತದೆ. ಹಾಗೆಯೇ, ಇದು ಹೀಗೆ ಆಗಲು ಸಾಧ್ಯವಿಲ್ಲ ಎಂದುಕೊಂಡದ್ದನು ಸಾಧ್ಯ ಎನ್ನುತ್ತೆ. ಉದಾಹರಣೆಗೆ ಇಲ್ಲಿ ನೋಡಿ, ಭೂಮಿಯ ವಾಯುಮಾಲಿನ್ಯಕ್ಕೂ, ಮಿಂಚಿಗೂ ಏನಾದರೂ ಸಂಬಂಧ ಇದೆಯೇ? ನಮ್ಮಂತಹ ಸಾಮಾನ್ಯರಿಗೆ ಇಲ್ಲ ಎಂದನಿಸುತ್ತದೆ ಅಲ್ಲವೇ? ಸರಿ ಆಯಿತು ಏನೋ ಸಂಬಂಧ ಇರಬಹುದು. ವಾಯುಮಾಲಿನ್ಯ ಮಿಂಚಿನ ತೀವ್ರತೆಯೋ, ಮತ್ತೊಂದನ್ನೋ ನಿರ್ಧರಿಸಲು ಸಹಾಯಕವಾಗಬಹುದೇನೋ ಎಂದು ಸುಮ್ಮನೆ ಊಹಿಸಬಹುದು ಕೆಲವರು. ಆದರೆ ನಮ್ಮ ವಾಯುಮಂಡಲದಲ್ಲಿನ ವಾಯು ಮಾಲಿನ್ಯವನ್ನು ಮಿಂಚು ಕಡಿಮೆ ಮಾಡುತ್ತವೆ ಎಂದರೆ

ನಂಬಲಾದೀತೆ? ನೋಡಿ ಇದನ್ನೇ ಹೇಳಿದ್ದು ನಾನು. ಈ ಮಳೆ ಮೋಡಗಳನ್ನು ಅಭ್ಯಾಸ ಮಾಡಲೆಂದೇ ಕೆಲವು ವಿಮಾನಗಳನ್ನು 'ನಾಸಾ (NASA) ಸಂಸ್ಥೆ ಬಿಟ್ಟಿದೆ. ಅವುಗಳು ಸಂಗ್ರಹಿಸಿದ ಮಾಹಿತಿಯ ಪ್ರಕಾರ ನೋಡುವುದಾದರೆ, ಮಿಂಚು ಬರುವ ಸಮಯದಲ್ಲಿ ಕೆಲವು ರಾಸಾಯನಿಕ ವಸ್ತುಗಳೂ ಉತ್ಪತ್ತಿಯಾಗುತ್ತವೆ. ಅದರಲ್ಲಿ 'ಆಕ್ಸಿಡೆಂಟ್ಸ್ *(oxidants)*' ಎಂಬುದೂ ಒಂದು ಬಗೆಯ ರಾಸಯನಿಕ ವಸ್ತು. ಇದು ವಾಯುಮಾಲಿನ್ಯಕ್ಕೆ ಕಾರಣರಾದ 'ಮೀಥೇನ್' ನಂತಹ ವಸ್ತುವಿನ ಜೊತೆ ಸೇರಿ ನೀರಿನಲ್ಲಿ ಕರಗುವ ಹಾಗೆ ಮಾಡಿ, ಮಳೆ ಬಂದಾಗ ಆ ಮಾಲಿನ್ಯಕಾರಕ ವಸ್ತುಗಳನ್ನೂ ಮಳೆಯ ಜೊತೆಯಲ್ಲಿ ಭೂಮಿಗೆ ತಂದು ಬಿಸಾಡುತ್ತದೆ. ಹೀಗೆ ಮಾಡಿದರೆ ವಾಯುಮಾಲಿನ್ಯ ಕಡಿಮೆ ಮಾಡಿದ ಹಾಗೆ ಅಲ್ಲವೇ?



ನಿಜ ಹೇಳುವುದಾದರೆ, ಮಿಂಚು ನೈಟ್ರಿಕ್ ಆಕ್ಸೈಡ್ (Nitric Oxide)' ಅನ್ನು ಉತ್ಪಾದಿಸುತ್ತದೆ, ಆ ಆಕ್ಸೈಡ್ ನಿಂದ 'ಹೈಡ್ರಾಕ್ಸೈಲ್ ರ್‍ಯಾಡಿಕಲ್ (hydroxyl radical)' ಗಳಂತಹ ಆಕ್ಸಿಡೆಂಟ್ ಗಳು ಬರುತ್ತವೆ ಎಂಬ ವಿಷಯ ಸಂಶೋಧಕರಿಗೆ ಈಗಾಗಲೇ ತಿಳಿದಿದೆ. ಆದರೆ ನಾಸಾ ಸಂಸ್ಥೆಯ ಇತ್ತೀಚಿನ ಸಂಶೋಧನೆ ಹೇಳುತ್ತದೆ, ಮಿಂಚು ನೈಟ್ರಿಕ್ ಆಕ್ಸೈಡ್ ಗಳಂತಹ ಮಧ್ಯವರ್ತಿಗಳಿಲ್ಲದೆಯೇ ನೇರವಾಗಿ ಎರಡು ತರಹದ ಆಕ್ಸಿಡೆಂಟ್ಗಳು ಉತ್ಪತ್ತಿಯಾಗುತ್ತಿವೆ, ಅದೂ ಸಾವಿರಾರು ಸಂಖ್ಯೆಯಲ್ಲಿ. ಒಂದು 'ಹೈಡ್ರಕ್ಸಿಲ್ ರ್‍ಯಾಡಿಕಲ್ *(OH)*' ಆದರೆ, ಇನ್ನೊಂದು 'ಹೈಡ್ರೋಪೆರಾಕ್ಸಿಲ್ ರ್‍ಯಾಡಿಕಲ್ *($HO_2$)*'. ಇವುಗಳು ನೂರು ಕೋಟಿ ಕಣಗಳಿಗೆ *(parts per trillion)* ಕೇವಲ ಬೆರಳೆಣಿಕೆಯಷ್ಟು ಕಣಗಳು ಮಾತ್ರ ಉತ್ಪತ್ತಿಯಾಗುತ್ತವೆ ಎಂದು ತಿಳಿಯಲಾಗಿತ್ತು. ಆದರೆ ಈಗ ಇವು ನೂರು ಕೋಟಿ ಕಣಗಳಿಗೆ ಹಲವಾರು ಸಾವಿರ ಕಣಗಳಾಗಿ ಉತ್ಪತ್ತಿಯಾಗುತ್ತಿವೆ ಎನ್ನುತ್ತಿದೆ ಈ ಸಂಶೋಧನೆ. 'ಇದನ್ನು ನಾವು ಊಹಿಸಿಯೂ ಇರಲಿಲ್ಲ' ಎನ್ನುತ್ತಾರೆ ಪೆನ್ ವಿಶ್ವವಿದ್ಯಾಲಯದ ಹವಾಮಾನ ವಿಜ್ಞಾನಿ ವಿಲಿಯಮ್ ಬ್ರೂನ್. 'ನಮಗೆ ಸಿಕ್ಕ ಸಂಖ್ಯೆಗಳು ತೀರಾ ಕಡಿಮೆ ಇದ್ದದ್ದರಿಂದ ಇದನ್ನು ನಾವು ಮೂಲೆಗೆ ಹಾಕಿದ್ದೆವು. ಆದರೆ ಈಗ ಈ ಸಂಖ್ಯೆಗಳಲ್ಲಿ ಹೈಡ್ರಾಕ್ಸಿಲ್ ಮತ್ತು ಹೈಡ್ರೋಪೆರಾಕ್ಸೈಲ್ ರ್‍ಯಾಡಿಕಲ್ ನೋಡುತ್ತಿದ್ದರೆ ಆಶ್ಚರ್ಯವಾಗುತ್ತದೆ ಎನ್ನುತ್ತಾರೆ.

ಇಡೀ ಭೂಮಿಯ ಮೇಲೆ ಒಂದು ಕ್ಷಣಕ್ಕೆ ಸುಮಾರು 1800 ಮಿಂಚುಗಳು ಬಂದು ಹೋಗುತ್ತವೆ. ಹಾಗಾದರೆ ಈ ಸಂಖ್ಯೆಯಲ್ಲಿ ಉತ್ಪತ್ತಿಯಾಗುವ ಆಕ್ಸಿಡ್ಯಾಂಟ್ ಗಳು

ವಾಯುಮಂಡಲದ 2-16% ಹೈಡ್ರಾಕ್ಸೈಲ್ ರ್‍ಯಾಡಿಕಲ್ *(OH)* ಗಳು ಮಿಂಚಿನಿಂದಲೇ ಎಂದು ಅಂದಾಜಿಸಲಾಗಿದೆ. ಇದರಿಂದ ವಾಯುಮಂಡಲದ ಮಾಲಿನ್ಯ ಗಣನೀಯವಾಗಿ ಕಡಿಮೆಯಾಗಲು ಸಾಧ್ಯವಿದೆ. ಹಾಗೆ ನೋಡಿದರೆ ಭೂದೇವಿ ತನ್ನನ್ನು ತಾನೇ ಸರಿಪಡಿಸಿಕೊಳ್ಳಲು ಬೇಕಾದ ಸಲಕರಣೆಗಳನ್ನು ತನ್ನ ಬಳಿಯೇ ಇಟ್ಟುಕೊಂಡಿದ್ದಾಳೆ. ಅವಳಿಗೆ ನಾವು ಅವಕಾಶ ಕೊಡುವ ಮನಸ್ಸು ಮಾಡಬೇಕು ಅಷ್ಟೇ. ಇಲ್ಲವಾದರೆ ಅವಳಿಗೇನು ನಷ್ಟವಿಲ್ಲ, ಇಂದಲ್ಲ ನಾಳೆ ಭೂಮಿ ಯಥಾಸ್ಥಿತಿಗೆ ಮರಳುತ್ತದೆ. ಅನುಭವಿಸಬೇಕಾಗಿರುವವರು ನಾವೇ... ಅಲ್ಲವೇ? ಯೋಚಿಸಿ ನೋಡಿ.

**ಮೂಲ ಲೇಖನ:** ScienceNewsforStudents





**ಲೇಖನ: ಜೈಕುಮಾರ್ ಆರ್.**
**ಡಬ್ಲ್ಯು.ಸಿ.ಜಿ. ಬೆಂಗಳೂರು ಜಿಲ್ಲೆ**

# ನೀಲಿ ಹುಳುಗುಳುಕ

ನೀಲಿ ಸುಂದರಿ
ಕಪ್ಪು ಕಣ್ಣು, ಕೊಕ್ಕು
ಕಾಲು ಬೆರಳು
ನಿಬಿಡ ತೊರೆದಡ
ಹಸುರ ಕಾನನದಿ
ಮಲೆ-ಅರೆಮಲೆನಾಡಲ್ಲಿ ಇರುವೆ

ಕೊಂಬೆ ಕಡ್ಡಿಗಳ ಮೇಲೆ
ನೆಟ್ಟಗೆ ಕೂರುವ ನೀರೆ
ಕೀಟ, ಹುಳು ತಿಂದು
ವಸಂತದಲಿ ಮೊಟ್ಟೆ ಮರಿ ಮಾಡಿ
ಗುಬ್ಬಚ್ಚಿಯಂತಿರುವೆಯಲ್ಲಾ...

ನಲ್ಲನೆಲ್ಲಿ?
ದೂರ ಬಿಟ್ಟು ಒಂಟಿಯಾಗಿರುವೆಯಾ?



ಹಸುರ ಕಾನಿನ ನಡುವೆ
ನಿನ್ನೆದೆಯ ದನಿ ಕೇಳುವುದು
ಜರಿ ಹರಿಯುವುದು
ಚೀಪ್...ಚೀ..ಚೀ..

ಸಿಳ್ಳಿಗೆ ದೂರದಲ್ಲಿ
ಮತ್ತೊಂದು ಸಿಳ್ಳು!

ನೀಲಿ ಸುಂದರಿ
ಈ ನಮ್ಮ ಲೋಕವನ್ನು
ಸಿಂಗರಿಸಿದ ನೀನೊಂದು
ಹಣಿಮುತ್ತು.
ಹಸುರ ನಡುವೆ ಚೀಪ್... ಚೀ ಎನ್ನುವ
ನೀಲಿ ಮುತ್ತು.

- ರಾಮಾಂಜಿನಯ್ಯ ವಿ.
ಕೋಲಾರ ಜಿಲ್ಲೆ

# ಪ್ರಕೃತಿ ಬಿಂಬ



**ದೊಡ್ಡ ನೀರುಕಾಗೆ** **© ಅಭಿನಂದನ್ ಬಿ. ಎ.**

ದೊಡ್ಡ ನೀರುಕಾಗೆ ಪಕ್ಷಿಯನ್ನು ನದಿಯ ದಡ ಹಾಗು ಸಿಹಿ ನೀರಿನ ಸರೋವರಗಳಲ್ಲಿ ಹೆಚ್ಚಾಗಿ ಕಾಣಬಹುದು. ಇವುಗಳು ಚಳಿಗಾಲದಲ್ಲಿ ಆಹಾರಕ್ಕಾಗಿ ಕರಾವಳಿಯುದ್ದಕ್ಕೂ ವಲಸೆ ಹೋಗುತ್ತವೆ. ಇವುಗಳ ಮುಖ್ಯ ಆಹಾರ ಮೀನುಗಳು, ಇದು ನೀರಿನಲ್ಲಿ ಮುಳುಗಿ ಮೀನು ಹಿಡಿಯುವುದರಲ್ಲಿ ನಿಷ್ಣಾತ ಪಕ್ಷಿ. ಇವು ಜಲಚರ ಹಕ್ಕಿಗಳಾದರೂ ಕೂಡ ಇದರ ಪುಕ್ಕಗಳಿಗೆ ಜಲನಿರೋಧಕ ಶಕ್ತಿ ಇಲ್ಲ. ಇವುಗಳ ವಿಶೇಷತೆ ಎಂದರೆ ಆಳದಲ್ಲಿರುವ ಮೀನನ್ನು ಹಿಡಿಯಲು ತಮ್ಮ ಪುಕ್ಕಗಳಿಂದ ಗಾಳಿಯನ್ನು ಹೊರಹಾಕಿ ದೇಹದ ತೂಕವನ್ನು ಅಧಿಕಗೊಳಿಸಿ ನೀರಿನೊಳಗೆ ನುಗ್ಗಿ ಬೇಟೆಯಾಡುತ್ತವೆ. ಇವು ನೀರಿನ ಮೂಲಗಳಾದ ಕೆರೆ, ನದಿಗಳ ಸಮೀಪವಿರುವ ಮರಗಳ ಮೇಲೆ ಕಡ್ಡಿ ಮತ್ತು ಎಲೆಗಳನ್ನು ಬಳಸಿ ಗೂಡು ಕಟ್ಟಿ ಮರಿ ಮಾಡುತ್ತವೆ.



**ಜುಟ್ಟು ಗಿಡುಗ** **© ಅಭಿನಂದನ್ ಬಿ. ಎ.**

ಜುಟ್ಟು ಗಿಡುಗವು ಬೇಟೆಯ ಹಕ್ಕಿಯಾಗಿದ್ದು, ಅಕ್ಸಿಪಟ್ರಿಡೇ ಕುಟುಂಬಕ್ಕೆ ಸೇರಿದೆ. ಇವುಗಳನ್ನು ಹೆಚ್ಚಾಗಿ ಭಾರತ ಉಪಖಂಡ, ದಕ್ಷಿಣ ಭಾರತ ಮತ್ತು ಶ್ರೀಲಂಕಾದಲ್ಲಿ ಕಾಣಬಹುದು. ಸಣ್ಣ ಪ್ರಾಣಿಗಳು, ಪಕ್ಷಿಗಳು ಹಾಗು ಸರೀಸೃಪಗಳು ಇವುಗಳ ಮುಖ್ಯ ಆಹಾರವಾಗಿದೆ. ಇದರ ವಿಶೇಷತೆ ಕೆಲವೊಮ್ಮೆ ತನಗಿಂತ ದೊಡ್ಡದಾದ, ಭಾರವಾದ ಬೇಟೆಯನ್ನು ಹೊತ್ತೊಯ್ಯುವುದು. ಇವುಗಳು ಗುಡ್ಡಗಾಡು - ಕುರುಚಲು ಕಾಡು ಪ್ರದೇಶಗಳಲ್ಲಿ ಕಡ್ಡಿಗಳನ್ನು ಬಳಸಿ ಗೂಡು ಕಟ್ಟುತ್ತವೆ.



**ಹಾವು ಗಿಡುಗ** **© ಅಭಿನಂದನ್ ಬಿ. ಎ.**

ಹಾವು ಗಿಡುಗವು ಮಧ್ಯಮ ಗಾತ್ರದ ಬೇಟೆಯ ಹಕ್ಕಿಯಾಗಿದ್ದು, ಏಷ್ಯಾದ ಉಷ್ಣವಲಯದ ಅರಣ್ಯಗಳು ಇವುಗಳ ಆವಾಸಸ್ಥಾನ. ಸಣ್ಣ ಪಕ್ಷಿ, ಇಲಿ, ಅಳಿಲು ಮತ್ತು ಹಾವು ಇದರ ಆಹಾರ. ಈ ಹಾವು ಗಿಡುಗದ ವಿಶೇಷತೆ ಕುಳಿತಾಕ್ಷಣ ಅಥವಾ ಕೂಗುವಾಗ ನೆತ್ತಿಯ ಜುಟ್ಟು ಸೆಟೆದು ನಿಲ್ಲುತ್ತದೆ. ಹೆಚ್ಚಾಗಿ ಇವು ಚಳಿಗಾಲದ ಕೊನೆಯಲ್ಲಿ ಸಂತಾನೋತ್ಪತ್ತಿ ಕ್ರಿಯೆಯನ್ನು ನಡೆಸಿ ಬೇಸಿಗೆಯ ಆರಂಭದಲ್ಲಿ ಮೊಟ್ಟೆಗಳನ್ನಿಟ್ಟು ಮರಿ ಮಾಡುತ್ತವೆ.



**ಚಿಟ್ಟು ಗೂಬೆ** © **ಸೌಮ್ಯ ಅಭಿನಂದನ್**

ಚಿಟ್ಟು ಗೂಬೆಯು ದಕ್ಷಿಣ ಏಷ್ಯಾಕ್ಕೆ ಸೇರಿದ ನಿವಾಸಿ ಪಕ್ಷಿಯಾಗಿದೆ. ಇದನ್ನು IUCN ವರದಿಯ ಪ್ರಕಾರ Least Concern ಎಂದು ಪರಿಗಣಿಸಲಾಗಿದೆ. ಇದು ನಿಶಾಚರಿಯಾಗಿದ್ದು, ಮರೆಮಾಚುವ ಬಣ್ಣವನ್ನು ಹೊಂದಿದೆ. ಆದ್ದರಿಂದ ಇದನ್ನು ಹಗಲಿನಲ್ಲಿ ಹುಡುಕುವುದು ತುಂಬಾ ಕಷ್ಟಸಾಧ್ಯ. ಮರದ ಪೊಟರೆಗಳಲ್ಲಿ ಗೂಡು ಮಾಡುತ್ತವೆ. ಇವು ಜನವರಿ ಮತ್ತು ಏಪ್ರಿಲ್ ತಿಂಗಳುಗಳಲ್ಲಿ ಮೂರರಿಂದ ಐದು ಮೊಟ್ಟೆಗಳಿಗೆ ಸುಮಾರು 26 ದಿನಗಳವರೆಗೆ ಕಾವು ಕೊಟ್ಟು ಮರಿಮಾಡುತ್ತವೆ.

**ಚಿತ್ರ: ಅಭಿನಂದನ್ ಬಿ. ಎ.**

**ಲೇಖನ: ಸೌಮ್ಯ ಅಭಿನಂದನ್**

# ನೀವೂ ಕಾನನಕ್ಕೆ ಬರೆಯಬಹುದು




ನಾವೆಲ್ಲ ವಿಜ್ಞಾನದಲ್ಲಿ ಓದಿರಬಹುದು ನಮ್ಮ ಭೂಮಿಯು 71% ರಷ್ಟು ಭಾಗ ನೀರು ಮತ್ತು 29% ರಷ್ಟು ಭಾಗ ಭೂಮಿಯಿಂದ ಆವೃತವಾಗಿದೆ ಎಂದು. ಈ ನಮ್ಮ ಜಲಗೋಳದಲ್ಲಿ ಸುಮಾರು 96.4% ರಷ್ಟು ಸಮುದ್ರದ ನೀರು, ಉಳಿದ ನೀರಿನಲ್ಲಿ 1% ರಷ್ಟು ಅಥವಾ ಅದಕ್ಕಿಂತ ಕಡಿಮೆ ಶುದ್ಧ ನೀರು ಮತ್ತು 2-3% ರಷ್ಟು ನೀರು ಹಿಮ ಅಥವಾ ಹಿಮಾನದಿಗಳ ರೂಪದಲ್ಲಿ ಇದೆ. ಭೂಭಾಗವನ್ನು ಖಂಡಗಳಾಗಿ ಹೇಗೆ ಬೇರ್ಪಡಿಸಲಾಗಿದೆಯೋ ಅದೇ ರೀತಿ ಸಾಗರಗಳನ್ನು ಸಹ ಪ್ರಮುಖವಾಗಿ ಆರ್ಕ್ಟಿಕ್, ಅಂಟಾರ್ಕ್ಟಿಕ್, ಹಿಂದೂ ಮಹಾಸಾಗರ, ಅಟ್ಲಾಂಟಿಕ್ ಮತ್ತು ಪೆಸಿಫಿಕ್ ಎಂದು ಐದು ಸಾಗರಗಳಾಗಿ ವಿಂಗಡಿಸಲಾಗಿದೆ. ಪ್ರತೀ ವರ್ಷ ಜೂನ್ 8ರಂದು ಆಚರಿಸುವ 'ವಿಶ್ವ ಸಾಗರಗಳ ದಿನ' ವಾಗಿ ಕೂಡಾ ಆಚರಿಸಲಾಗುತ್ತದೆ.

ಮನುಷ್ಯನಿಗೆ ಸಾಗರಗಳು ಬಹಳ ಮುಖ್ಯ, ಪೊಸಿಡೋನಿಯಾದಂತಹ ಸಮುದ್ರ ಸಸ್ಯಗಳು ನಾವು ಉಸಿರಾಡುವ ಆಮ್ಲಜನಕದ 70% ರಷ್ಟನ್ನು ಉತ್ಪಾದಿಸುತ್ತವೆ ಮತ್ತು ಸಮುದ್ರದ ಆಳವಾದ ನೀರು ಸಾಗರ ಜೀವಿಗಳಿಗೆ ನೆಲೆಯಾಗಿದೆ. ಸಾಗರಗಳು ಪ್ರಸ್ತುತ ನಮಗೆ 17% ರಷ್ಟು ಸಮುದ್ರ ಆಹಾರವನ್ನು ಒದಗಿಸುತ್ತವೆ. ಲಕ್ಷಾಂತರ ಜನರಿಗೆ ಉದ್ಯೋಗ ನೀಡಿವೆ, ಸಾವಿರಾರು ಕಿಲೋಮೀಟರ್ ದೂರದವರೆಗೂ ಸರಕು ಸಾಗಣೆ ಮಾಡಲು ನೌಕಾ ಯಾನ ಅಥವಾ ಸಾಗರ ಸಾರಿಗೆಗೆ ಅನುಕೂಲ ಮಾಡಿಕೊಟ್ಟಿವೆ. ಇಷ್ಟೆಲ್ಲ ಅನುಕೂಲಗಳನ್ನು ತಿಳಿದಿದ್ದರೂ ಸಹ ನಾವು ಸಮುದ್ರ ಪರಿಸರ ವ್ಯವಸ್ಥೆಯನ್ನು ನಾಶಪಡಿಸುತ್ತಿದ್ದೇವೆ. ವಿಜ್ಞಾನಿಗಳು ಅಂದಾಜು ಒಂದು ಮಿಲಿಯನ್ ಪ್ರಭೇದದ ಪ್ರಾಣಿಗಳು ಸಾಗರದಲ್ಲಿ ವಾಸಿಸುತ್ತವೆ ಎಂದು ಹೇಳಿದ್ದಾರೆ. ಸಾಗರಗಳಲ್ಲಿ ಇಂದು ನಾವು ಅತಿಯಾದ ಮೀನುಗಾರಿಕೆ, ದೊಡ್ಡ ದೊಡ್ಡ ಶಾರ್ಕ್ ಗಳ ಬೇಟೆ, ಸಾಗರ ಯಾನ (ಪ್ರವಾಸೋದ್ಯಮ), ಜಲಸಾರಿಗೆ, ಸಮುದ್ರದ ಆಳದಲ್ಲಿನ ತೈಲ ಮತ್ತು ಅನಿಲ ಗಣಿಗಾರಿಕೆ, ಹವಾಮಾನ ಬದಲಾವಣೆ, ಪ್ಲಾಸ್ಟಿಕ್ ಹಾಗೂ ರಾಸಾಯನಿಕಗಳನ್ನು ಬಳಸಿ ಮಾಲಿನ್ಯ ಉಂಟುಮಾಡಿ ಸಮುದ್ರ ಜೀವಿಗಳಿಗೆ ಅಪಾಯವನ್ನು ತಂದೊಡ್ಡಿದೆ. ಹೀಗೇ, ಸಾಗರಗಳು ಮನುಷ್ಯನ ಉಳಿವಿಗೆ ಪ್ರಮುಖ ಪಾತ್ರವಹಿಸುತ್ತವೆ. ಸಾಗರ ಪರಿಸರ ವ್ಯವಸ್ಥೆಗೆ ತೊಂದರೆಯಾದರೆ, ಮನುಷ್ಯನೂ ಸಹ ಅಪಾಯಕ್ಕೆ ಸಿಲುಕುತ್ತಾನೆ. ಎಚ್ಚರ...! ಸಾಗರಗಳ ಸಂರಕ್ಷಣೆ, ನಮ್ಮೆಲ್ಲರ ಹೊಣೆ...!

ಈ ರೀತಿಯ ಪರಿಸರದ ಬಗೆಗಿನ ಮಾಹಿತಿಯನ್ನು ಒದಗಿಸಲು ಇರುವ ಕಾನನ ಇ-ಮಾಸಿಕಕ್ಕೆ ಮುಂದಿನ ತಿಂಗಳ ಸಂಚಿಕೆಗೆ ಲೇಖನಗಳನ್ನು ಆಹ್ವಾನಿಸಲಾಗಿದೆ. ಆಸಕ್ತರು ಪರಿಸರಕ್ಕೆ ಸಂಬಂಧಿಸಿದ ಕಥೆ, ಕವನ, ಛಾಯಾಚಿತ್ರ, ಚಿತ್ರಕಲೆ, ಪ್ರವಾಸ ಕಥನಗಳನ್ನು ಕಾನನ ಮಾಸಿಕದ ಇ-ಮೇಲ್ ವಿಳಾಸಕ್ಕೆ ಕಳುಹಿಸಬಹುದು.

**ಕಾನನ ಪತ್ರಿಕೆಯ ಇ-ಮೇಲ್ ವಿಳಾಸ**: kaanana.mag@gmail.com

**ಅಂಚೆ ವಿಳಾಸ**:

Study House,
ಕಾಳೇಶ್ವರಿ ಗ್ರಾಮ,
ಆನೇಕಲ್ ತಾಲ್ಲೂಕು,
ಬೆಂಗಳೂರು ನಗರ ಜಿಲ್ಲೆ,
ಪಿನ್ ಕೋಡ್ : 560083. ಗೆ ಕಳಿಸಿಕೊಡಬಹುದು.